

ಬೆಂಗಳೂರಿನಲ್ಲಿ ಮಂಗಳವಾರ ನಡೆದ ಡಬ್ಲ್ಯು.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಡಾ.ಜಿ.ಬಿ. ಹರೀಶ್, ಡಾ. ಹೋ.ಶ್ರೀನಿವಾಸಯ್ಯ ಮತ್ತು ಡಾ. ವೂಡೆ ಪಿ.ಕೃಷ್ಣ ಭಾಗವಹಿಸಿದ್ದರು.

# 'ಹಿಂದ್ ಸ್ವರಾಜ್‌ನಿಂದ ಆತ್ಮಬಲ'

**ವಿಕ ಸುದ್ದಿಲೋಕ** ಬೆಂಗಳೂರು

ಭಾರತೀಯ ಒಳ ಹಾಗೂ ಹೊರಗಿನ ಎಲ್ಲ ಸಂಕಟ ಕಳೆದುಕೊಂಡು ಸ್ವಾಭಿಮಾನದಿಂದ ಹೇಗೆ ಜೀವನ ನಡೆಸಬೇಕೆಂಬುದನ್ನು ಗಾಂಧೀಜಿ 'ಹಿಂದ್ ಸ್ವರಾಜ್ ' ಕೃತಿ ಮೂಲಕ ಈ ಹಿಂದೆಯೇ ಜನರಿಗೆ ತಿಳಿಸಿದ್ದರೆಂದು ಲೇಖಕ ಜಿ ಬಿ ಹರೀಶ್ ತಿಳಿಸಿದರು.

ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನವು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಗಾಂಧಿ ಭವನದಲ್ಲಿ ಮಂಗಳವಾರ ಏರ್ಪಡಿಸಿದ್ದ ಬ್ರಹ್ಮ ಸಮಾಜದ ಮುಖಂಡ ಹಾಗೂ ಗಾಂಧಿವಾದಿ ಡಬ್ಲ್ಯು ಎಚ್ ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸದಲ್ಲಿ 'ಹಿಂದ್ ಸ್ವರಾಜ್: ಕೆಲವು ನೋಟಗಳು' ಕುರಿತ ಉಪನ್ಯಾಸದಲ್ಲಿ ಅವರು ಮಾತನಾಡಿದರು.

"ಎಲ್ಲವನ್ನೂ ಪ್ರೀತಿಯಿಂದ ಗೆಲ್ಲಬೇಕೇ ಹೊರತು, ದ್ವೇಷದಿಂದ ಅಲ್ಲ. ಈ ಕೃತಿ ಓದಿದಾಗ ಹಿಂಸೆಯ ಬದಲು ಆತ್ಮಬಲ ಹೆಚ್ಚುತ್ತದೆ. ಇದರಿಂದ ನಾವು ಭಾರತೀಯರಾಗಿ ಹೇಗೆ ಬದುಕಬಹುದು ಹಾಗೂ ಅನಾರೋಗ್ಯದ ಭಾರತವನ್ನು ಸರಿದಾರಿಗೆ ಹೇಗೆ ತರಬಹುದೆಂಬುದನ್ನು ತಿಳಿಸಿದೆ," ಎಂದು ವಿಶ್ಲೇಷಿಸಿದರು.

**ಗಾಂಧಿ ಮಾರ್ಗ ಅನುಸರಿಸಿ:** ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಹೋ ಶ್ರೀನಿವಾಸಯ್ಯ ಮಾತನಾಡಿ "ಮಕ್ಕಳಿಗೆ ಗಾಂಧಿ ಮಾರ್ಗ ಅನುಸರಿಸುವುದನ್ನು ಪೋಷಕರು ಕಲಿಸಬೇಕು," ಎಂದು ಸಲಹೆ ನೀಡಿದರು.

ದತ್ತಿ ದಾನಿಗಳ ಪ್ರತಿನಿಧಿ ಡಬ್ಲ್ಯೂ ಎಚ್ ದೇವಕುಮಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ.ಜಿ ಬಿ ಶಿವರಾಜು, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೆ ಪಿ ಕೃಷ್ಣ ಪಾಲ್ಗೊಂಡಿದ್ದರು.

ಕನ್ನಡಪ್ರಭ
ಬೆಂಗಳೂರು | ಶನಿವಾರ 21 | ಡಿಸೆಂಬರ್ 2013

# ಈಗ ಕಾಣದ ಗುರು ಶಿಷ್ಯ ಸಂಬಂಧ

## ಪ್ರೊ. ರಾಮಚಂದ್ರೇಗೌಡ ದತ್ತಿ ಕಾರ್ಯಕ್ರಮದಲ್ಲಿ ಸಚಿವ ರಾಮಲಿಂಗಾ ರೆಡ್ಡಿ ವಿಷಾದ

ಕ.ಪ್ರ.ವಾರ್ತೆ | ಬೆಂಗಳೂರು | ಡಿ.20

ಹಿಂದಿನ ಕಾಲದಲ್ಲಿದ್ದ ಗುರು– ಶಿಷ್ಯರ ಸಂಬಂಧವನ್ನು ಈಗ ಕಾಣಲು ಸಾಧ್ಯವಿಲ್ಲ. ಈಗ ವಿದ್ಯಾರ್ಥಿಗಳು ಶಿಕ್ಷಕರ ಬಾಂಧವ್ಯ ಯಾಂತ್ರಿಕವಾಗುತ್ತಿದೆ ಎಂದು ಸಾರಿಗೆ ಸಚಿವ ರಾಮಲಿಂಗಾ ರೆಡ್ಡಿ ಅಭಿಪ್ರಾಯಪಟ್ಟರು.

ಗಾಂಧಿಭವನದಲ್ಲಿ ಶುಕ್ರವಾರ ಏರ್ಪಡಿಸಲಾಗಿದ್ದ ಪ್ರೊ. ರಾಮಚಂದ್ರೇಗೌಡ ದತ್ತಿ ಉದ್ಘಾಟನೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಪ್ರೊ. ರಾಮಚಂದ್ರೇಗೌಡ ಅವರು ಉತ್ತಮ ಕನ್ನಡ ಅಧ್ಯಾಪಕರಾಗಿದ್ದರು. 1967– 68ರಲ್ಲಿ ಹಿಂದಿ ಭಾಷೆ ವಿರುದ್ಧ ಪ್ರತಿಭಟನೆ ನಡೆಯುತ್ತಿತ್ತು. ನಾವೆಲ್ಲಾ ಗೆಳೆಯರು ಹಿಂದಿ ಭಾಷೆಯ ಪರೀಕ್ಷೆ ಬರೆಯುವುದು ಬೇಡ ಎಂದು ನಿರ್ಧರಿಸಿದ್ದೆವು. ನಾನು ಪರೀಕ್ಷೆ ಆರಂಭವಾದ ಅರ್ಧ ಗಂಟೆಯಲ್ಲೇ ಕ್ಲಾಸ್‌ನಿಂದ ಹೊರಗೆ ಬಂದೆ. ಆದರೆ ಪರೀಕ್ಷೆ ಬರೆಯುವುದಿಲ್ಲವೆಂದು ಮಾತು ಕೊಟ್ಟಿದ್ದ ನನ್ನ ಗೆಳೆಯರು ಪರೀಕ್ಷೆ ಬರೆದೇ ಹೊರಬಂದರು ಎಂದು ತಮ್ಮ ವಿದ್ಯಾರ್ಥಿ ಜೀವನವನ್ನು ನೆನಪಿಸಿಕೊಂಡರು.

ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎಂ.ಎ. ಪೊನ್ನಪ್ಪ ಮಾತನಾಡಿ, ರಾಮಚಂದ್ರೇಗೌಡ ಅವರು ಕನ್ನಡದಲ್ಲಿ ಓದುವ ಕ್ರಮವನ್ನು ಹೇಳಿಕೊಟ್ಟವರು. ವಿದ್ಯಾರ್ಥಿಗಳನ್ನು ಮಕ್ಕಳಂತೆ ಕಾಣುತ್ತಿದ್ದರು. ಕನ್ನಡ ಸಂಘಗಳನ್ನು ಕಟ್ಟುವ ಮೂಲಕ ಕಾಲೇಜುಗಳಲ್ಲಿ ಕನ್ನಡದ ಕಂಪು ಹರಡುತ್ತಿದ್ದರು ಎಂದರು.



ಪ್ರೊ. ರಾಮಚಂದ್ರೇಗೌಡ ದತ್ತಿಯನ್ನು ಸಾರಿಗೆ ಸಚಿವ ರಾಮಲಿಂಗಾರೆಡ್ಡಿ ಶುಕ್ರವಾರ ಉದ್ಘಾಟಿಸಿದರು. ಡಾ.ವೀರೇಶಾನಂದ ಸರಸ್ವತಿ ಸ್ವಾಮಿ, ವಿಶುಕುಮಾರ್, ಎಂ.ಎ.ಪೊನ್ನಪ್ಪ, ಡಾ.ಹೊ.ಶ್ರೀನಿವಾಸಯ್ಯ ಹಾಜರಿದ್ದರು.

ಉದಯವಾಣಿ

ಶನಿವಾರ | ಡಿಸೆಂಬರ್ | 21 | 2013



## ವಿಚಾರ ಸಂಕಿರಣ

ನಗರದ ಗಾಂಧಿಭವನದಲ್ಲಿ ಶುಕ್ರವಾರ ಆಯೋಜಿಸಿದ್ದ ವಿಚಾರ ಸಂಕಿರಣವನ್ನು ಸಚಿವ ರಾಮಲಿಂಗಾರೆಡ್ಡಿ ಉದ್ಘಾಟಿಸಿದರು. ಡಾ. ವೀರೇಶಾನಂದ ಸ್ವಾಮೀಜಿ, ಎನ್.ಆರ್. ವಿಶುಕುಮಾರ್, ಹೊ. ಶ್ರೀನಿವಾಸಯ್ಯ ಇತರರು ಇದ್ದರು.

ಸಂಯುಕ್ತ ಕರ್ನಾಟಕ । ಬೆಂಗಳೂರು। ಡಿಸೆಂಬರ್ । 21 । 2013

# 'ಮರೆಯಾದ ಗುರು–ಶಿಷ್ಯರ ಬಾಂಧವ್ಯ'

ಬೆಂಗಳೂರು, ಡಿ 20: ಜಾಗತೀಕರಣ ಪ್ರಭಾವದಿಂದ ಇಂದಿನ ಕಾಲದ ಗುರು–ಶಿಷ್ಯರ ಸಂಬಂಧ ಕೃತಕಗೊಂಡಿದೆ ಎಂದು ಸಾರಿಗೆ ಸಚಿವ ರಾಮಲಿಂಗಾರೆಡ್ಡಿ ವಿಷಾದಿಸಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಮತ್ತು ಪ್ರೊ.ಬಿ.ಆರ್. ರಾಮಚಂದ್ರೇಗೌಡ ಟ್ರಸ್ಟ್, ಶೇಷಾದ್ರಿಪುರಂ ಶಿಕ್ಷಣ ದತ್ತಿ ಆಯೋಜಿಸಿದ್ದ ಪ್ರೊ.ರಾಮಚಂದ್ರೇಗೌಡರ ದತ್ತಿ ಉದ್ಘಾಟನಾ ಹಾಗೂ 'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ ಸಂದೇಶ ದತ್ತಿ ಪ್ರವಚನ'ದ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಅವರು, ಹಿಂದಿನ ಕಾಲದಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವೆ ಅವಿನಾಭವ ಸಂಬಂಧವಿತ್ತು, ಶಿಕ್ಷಕರನ್ನು ಕಂಡರೆ ವಿದ್ಯಾರ್ಥಿಗಳು ಗೌರವ ಭಾವದಿಂದ ನೋಡುತ್ತಿದ್ದರು, ಆದರೆ ಇಂದು ಅಂತಹ ಪರಿಸ್ಥಿತಿ ಮರೆಯಾಗುತ್ತಿದೆ ಎಂದರು.

ಸರ್ಕಾರಿ ಕಲಾ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಪ್ರೊ.ರಾಮಚಂದ್ರೇಗೌಡರು ನಮ್ಮ ಶಿಕ್ಷಕರಾಗಿದ್ದರು. ನಮಗೆ ಉತ್ತಮ ಮಾರ್ಗದರ್ಶನ ನೀಡಿ ಬದುಕುವುದನ್ನು ಕಲಿಸಿಕೊಟ್ಟರು. ವಿದ್ಯಾರ್ಥಿಗಳೊಂದಿಗೆ ಆತ್ಮೀಯತೆ ಸಂಬಂಧ ಹೊಂದಿದ್ದ ಅವರು, ಮಕ್ಕಳಂತೆ ನೋಡುತ್ತಿದ್ದರು. ವಿದ್ಯಾಭ್ಯಾಸ ಮಾಡುತ್ತಿರುವ ಸಂದರ್ಭದಲ್ಲಿ ಹಿಂದಿ ವಿರೋಧಿ ಚಳವಳಿ ನಡೆಸುತ್ತಿದ್ದ ವಿದ್ಯಾರ್ಥಿಗಳನ್ನು ಕರೆದು ಮಾರ್ಗದರ್ಶನ ನೀಡುತ್ತಿದ್ದರು ಎಂದು ಸ್ಮರಿಸಿಕೊಂಡರು.



ಬೆಂಗಳೂರಿನಲ್ಲಿ ಶುಕ್ರವಾರ ನಡೆದ ಕಾರ್ಯಕ್ರಮದಲ್ಲಿ ಪ್ರೊ.ರಾಮಚಂದ್ರೇಗೌಡರ ದತ್ತಿ ಉದ್ಘಾಟನೆ ಹಾಗೂ 'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ' ಸಂದೇಶ ದತ್ತಿ ಪ್ರವಚನದ ಸಮಾರಂಭವನ್ನು ಸಾರಿಗೆ ಸಚಿವ ರಾಮಲಿಂಗಾರೆಡ್ಡಿ ಉದ್ಘಾಟಿಸಿದರು. ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎಂ.ಎ.ಪೊನ್ನಪ್ಪ, ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮ ಅಧ್ಯಕ್ಷ ಡಾ. ವೀರೇಶಾನಂದ ಸರಸ್ವತಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎಂ.ಎ.ಪೊನ್ನಪ್ಪಮಾತನಾಡಿ, ಪ್ರೊ.ರಾಮಚಂದ್ರೇಗೌಡರು ಕನ್ನಡದಲ್ಲಿ ಪಂಡಿತರಾಗಿದ್ದರು. ಮೂಲತಃ ಕೊಡಗಿನವನಾದ ನನಗೆ ಕನ್ನಡ ಕಲಿಯುವ ಆಸಕ್ತಿ ಮೂಡಿಸಿದವರು, ನಮ್ಮಿಬ್ಬರ ನಡುವೆ ಆತ್ಮೀಯ ಸ್ನೇಹ ಇತ್ತು, ಕನ್ನಡದ ಸಾಹಿತ್ಯವನ್ನು ಅದ್ಭುತವಾಗಿ ವಿವರಿಸುತ್ತಿದ್ದರು, ಕಾಲೇಜಿನಲ್ಲಿ ಕನ್ನಡ ಸಂಘಗಳನ್ನು ಸ್ಥಾಪನೆ ಮಾಡಿ ಅಂದಿನ ಯುವ ವಿದ್ಯಾರ್ಥಿಗಳಿಗೆ ಕನ್ನಡದ ಬೆಳವಣಿಗೆಗೆ ಪೂರಕ ವಾತಾವರಣ ನಿರ್ಮಿಸಿ, ವಿದ್ಯಾರ್ಥಿಗಳ ನಡುವೆ ಸಾಮರಸ್ಯ ಉಂಟು ಮಾಡುತ್ತಿದ್ದರು ಎಂದು ಸ್ಮರಿಸಿದರು.

ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮ ಅಧ್ಯಕ್ಷ ಡಾ.ವೀರೇಶಾನಂದ ಸರಸ್ವತಿ ಮಾತನಾಡಿ, ಎಲ್ಲಾ ಶಿಕ್ಷಕರು ಉತ್ತಮ ಶಿಕ್ಷಕರಾಗಿರಲು ಸಾಧ್ಯವಿಲ್ಲ, ಆದರೆ ಕೆಲವರು ಮಾತ್ರ ಉತ್ತಮ ಶಿಕ್ಷಕರಾಗಿ ಉಳಿಯುತ್ತಾರೆ. ಅಂತಹವರಲ್ಲಿ ಪ್ರೊ.ರಾಮಚಂದ್ರೇಗೌಡರು ಒಬ್ಬರು. ಸ್ವಾಮಿ ವಿವೇಕಾನಂದ, ಗಾಂಧೀಜಿಯವರು ನೈತಿಕ ಮೌಲ್ಯಗಳನ್ನು ವಿಶ್ವವೇ ಸ್ವೀಕರಿಸಲು ಸಿದ್ಧವಾಗಿದೆ. ಆದರೆ ದುರದೃಷ್ಟ ಸಂಗತಿ ಎಂದರೆ ಭಾರತೀಯರು ಮಾತ್ರ ಅವರ ಆದರ್ಶ ಮೌಲ್ಯಗಳನ್ನು ಸ್ವೀಕರಿಸಲು ಮುಂದಾಗುತ್ತಿಲ್ಲ ಎಂದು ವಿಷಾದ ವ್ಯಕ್ತಪಡಿಸಿದರು.

ಈ ಸಂಜೆ
ಶುಕ್ರವಾರ, 20 ಡಿಸೆಂಬರ್, 2013



ಮಹಾತ್ಮ ಗಾಂಧಿ ಕುರಿತಂತೆ ಗಾಂಧಿ ಭವನದಲ್ಲಿ ಆಯೋಜಿಸಲಾಗಿದ್ದ ವಿಚಾರ ಸಂಕಿರಣವನ್ನು ಸಾರಿಗೆ ಸಚಿವ ರಾಮಲಿಂಗಾರೆಡ್ಡಿ ಉದ್ಘಾಟಿಸಿದರು. ರಾಮಕೃಷ್ಣ ಆಶ್ರಮದ ಡಾ. ವೀರೇಶಾನಂದ ಸ್ವಾಮೀಜಿ, ಹೊ.ಶ್ರೀನಿವಾಸಯ್ಯ, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಪೊನ್ನಪ್ಪ, ಡಬ್ಲ್ಯು.ಪಿ.ಕೃಷ್ಣ, ವಾರ್ತಾ ಇಲಾಖೆ ನಿರ್ದೇಶಕ ವಿಶು ಕುಮಾರ್ ಮತ್ತಿತರರು ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ ಡಿಸೆಂಬರ್ 19 2013

# ಮಹಾತ್ಮಾ ಗಾಂಧಿ ಹೆಚ್ಚು ಪ್ರಸ್ತುತ

ಬೆಂಗಳೂರು, ಡಿ. 18: ದೇಶದಲ್ಲಿ ಹಿಂಸೆ, ಜಾತ್ಯತೀತ, ಅಸತ್ಯ ತಾಂಡವವಾಡುತ್ತಿರುವ ಈ ಸಂದರ್ಭದಲ್ಲಿ ಗಾಂಧಿತತ್ವಗಳು ಹಿಂದೆಂದಿಗಿಂತಲೂ ಇವತ್ತು ಹೆಚ್ಚು ಪ್ರಸುತವಾಗಿವೆ ಎಂದು ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಹೇಳಿದರು.

ನಗರದ ಗಾಂಧಿಭವನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಆಯೋಜಿಸಿದ್ದ ನೆಲ್ಸನ್ ಮಂಡೇಲ ಅವರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಗಾಂಧೀಜಿ ಇಡೀ ವಿಶ್ವಕ್ಕೆ ಮಾನವತಾವಾದ ತತ್ವ ನೀಡಿ ಮಹಾನ್ ನಾಯಕರಾದರು. ಅವರು ಅನುಸರಿಸಿದ ಮಾರ್ಗಗಳನ್ನು ಈಗಲೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಾಕಷ್ಟು ಅನುಯಾಯಿಗಳಿದ್ದಾರೆ. ಆದರೆ, ಅವರ ಮಾರ್ಗ ಅನುಸರಿಸಬೇಕಾದ ಯುವಕರು, ರಾಜಕಾರಣಿಗಳ ಮನಸ್ಸಿನಿಂದ ಗಾಂಧೀಜಿ ದೂರವಾಗುತ್ತಿರುವುದು ಮನಸಿಗೆ ನೋವು ಉಂಟು ಮಾಡುತ್ತಿದೆ. ಇಂದಿನ ಯುವಜನತೆ ಮಹಾತ್ಮ ಗಾಂಧಿ, ನೆಲ್ಸನ್ ಮಂಡೇಲ, ಮಾರ್ಟಿನ್ ಲೂಥರ್ ಕಿಂಗ್ ಅವರ ಜೀವನ, ಇತಿಹಾಸ ತಿಳಿದುಕೊಳ್ಳುವ ಮೂಲಕ, ಅವರು ಹಾಕಿಕೊಟ್ಟ ಮಾರ್ಗಗಳನ್ನು ಅನುಸರಿಸಬೇಕಾದ ಅವಶ್ಯಕತೆ ಇದೆ ಎಂದು ತಿಳಿಸಿದರು.



ನಗರದಲ್ಲಿ ಬುಧವಾರ ಆಯೋಜಿಸಲಾಗಿದ್ದ ನೆಲ್ಸನ್ ಮಂಡೇಲ ಅವರಿಗೆ ಶ್ರದ್ಧಾಂಜಲಿ ಸಮಾರಂಭದಲ್ಲಿ ದೆಹಲಿ ಗಾಂಧಿಭವನದ ಕಾರ್ಯದರ್ಶಿ ಸುರೇಂದ್ರ ಕುಮಾರ್, ರಾಜ್ಯಪಾಲ ಎಚ್. ಆರ್. ಭಾರದ್ವಾಜ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್. ಕೆ. ಪಾಟೀಲ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ಕಾರ್ಯದರ್ಶಿ ಪ್ರೊ. ಜಿ. ಮಲ್ಲೇಪುರಂ ಜಿ. ವೆಂಕಟೇಶ್ ಭಾಗವಹಿಸಿದ್ದರು.

ದಕ್ಷಿಣ ಆಫ್ರಿಕಾದ ಗಾಂಧಿ ಎಂದೇ ಪ್ರಸಿದ್ಧಿ ಹೊಂದಿದ್ದ, ಕರಿಯರ ಹಕ್ಕು ಹೋರಾಟಗಾರ, ವಿಶ್ವದ ಮಹಾನ್ ಮಾನವತಾವಾದಿ ನೆಲ್ಸನ್ ಮಂಡೇಲ ಅವರ ಸಾವು, ಕೇವಲ ಆಫ್ರಿಕಾಕ್ಕೆ ಮಾತ್ರ ನಷ್ಟ ಉಂಟುಮಾಡಿಲ್ಲ. ಇಡೀ ವಿಶ್ವಕ್ಕೆ ತುಂಬಲಾರದ ನಷ್ಟ ಉಂಟು ಮಾಡಿದೆ ಎಂದ ರಾಜ್ಯಪಾಲ ಎಚ್. ಆರ್. ಭಾರದ್ವಾಜ್, ನೆಲ್ಸನ್ ಮಂಡೇಲ ತಮ್ಮ ಜನಾಂಗದ ಹಕ್ಕುಗಳಿಗಾಗಿ 27 ವರ್ಷಗಳ ಕಾಲ ಜೈಲಿನಲ್ಲಿ ಇದ್ದರೂ ಎಂದು ಕೂಡಾ ಮಾನವತಾವಾದವನ್ನು ಬಿಡಲಿಲ್ಲ. ಅವರು ಗಾಂಧೀಜಿಯನ್ನು ನೇರವಾಗಿ ನೋಡದಿದ್ದರೂ, ಅವರು ಬರೆದ ಪುಸ್ತಕ, ತತ್ವಗಳಾದ ಸತ್ಯ, ಅಹಿಂಸೆ ಮಾರ್ಗಗಳಿಂದ ಪ್ರಭಾವಿತರಾಗಿದ್ದರು ಎಂದು ತಿಳಿಸಿದರು.

ಆಫ್ರಿಕಾದಲ್ಲಿ ಕರಿಯರ ಮೇಲೆ ಬಿಳಿಯರು ಎಷ್ಟೇ ಹಿಂಸೆಯ ಮಾಡಿದರೂ, ಮಂಡೇಲ ರಾಷ್ಟ್ರಾಧ್ಯಕ್ಷರಾದ ನಂತರ ಅವರ ವಿರುದ್ಧ ದ್ವೇಷ ರಾಜಕಾರಣ ಮಾಡಲಿಲ್ಲ. ಬಿಳಿಯರಿಗೂ ಉಪರಾಷ್ಟ್ರಾಧ್ಯಕ್ಷ ಸ್ಥಾನ ಕೊಟ್ಟು ಮಾನವತಾವಾದ ಮೆರೆದರು. ಮಂಡೇಲ ಅವರು ಪ್ರತಿಯೊಂದು ಕಾರ್ಯ ಗಾಂಧೀಜಿ ಹಾಕಿಕೊಟ್ಟ ಮಾರ್ಗದಲ್ಲಿಯೇ ನಡೆದಿದ್ದವು. ಹೀಗಾಗಿ ನೆಲ್ಸನ್ ಮಂಡೇಲ ಅವರು ವಿಶ್ವಕ್ಕೆ ಎರಡನೇ ಗಾಂಧಿ ಎನಿಸಿಕೊಂಡರು ಎಂದರು.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ, ಗಾಂಧೀಜಿಯ ನಂತರ ಇಡೀ ವಿಶ್ವಕ್ಕೆ ಮತ್ತೆ ಗಾಂಧಿತತ್ವ ಅನುಸರಿಸಿದ ನೆಲ್ಸನ್ ಮಂಡೇಲಗೆ ಭಾರತೀಯರಾದ ನಾವು ಗೌರವ ಸಲ್ಲಿಸುವುದರ ಜತೆಗೆ ಕೃತಜ್ಞತೆ ಸಲ್ಲಿಸಬೇಕಾಗುತ್ತದೆ. ಇಂದು ಯಾರಿಗಾದರೂ ಒಂದು ದಿನ ತಮ್ಮ ಹಕ್ಕುಗಳನ್ನು ಕಿತ್ತುಕೊಂಡರೆ, ಅದರ ವಿರುದ್ಧ ದೊಡ್ಡ ಹೋರಾಟವೇ ನಡೆಯುತ್ತದೆ.

ಆದರೆ, ನೆಲ್ಸನ್ ಮಂಡೇಲ ತಮ್ಮ ಜನಾಂಗದ ಹಕ್ಕು ರಕ್ಷಣೆಗಾಗಿ ತನ್ನ ಹಕ್ಕನ್ನು 27 ವರ್ಷಗಳ ಕಾಲ ಒತ್ತೆ ಇಟ್ಟಿದ್ದರು ಎಂದರೆ ಆಶ್ಚರ್ಯ ಆಗುವಂತಹದು. ಅವರು ಅಷ್ಟೊಂದು ವರ್ಷಗಳ ಕಾಲ ಜೈಲಿನಲ್ಲಿ ಇರಲು ಗಾಂಧೀಜಿ ತತ್ವಗಳು ಪ್ರೇರಣೆಯಾಗಿದ್ದವು ಎಂದು ಹೇಳಿದರು.

ಕರ್ನಾಟಕ ಗಾಂಧಿಸ್ಮಾರಕ ನಿಧಿಯ ಅಧ್ಯಕ್ಷ ಹೊ. ಶ್ರೀನಿವಾಸಯ್ಯ ಮಾತನಾಡಿ, ಗಾಂಧೀಜಿ ಆಫ್ರಿಕಾಕ್ಕೆ ಹೋಗುವ ಮುಂಚೆ ಎಂ.ಕೆ. ಗಾಂಧಿಯಾಗಿ ಹೋಗಿದ್ದರು. ಅಲ್ಲಿನ ಕರಿಯರ ವಿರುದ್ಧ ನಡೆಯುತ್ತಿರುವ ಅನ್ಯಾಯದ ವಿರುದ್ಧ ಹೋರಾಡಿ ಭಾರತಕ್ಕೆ ಮರಳುವಾಗ ಮಹಾತ್ಮ ಗಾಂಧಿಯಾಗಿ ಪರಿವರ್ತನೆ ಹೊಂದಿದರು. ಹಾಗೆ ಅವರ ಮಾರ್ಗ ಅನುಸರಿಸಿದ ನೆಲ್ಸನ್ ಮಂಡೇಲ ಕೂಡಾ ವಿಶ್ವದ ಶ್ರೇಷ್ಠ ಮಾನವತಾವಾದಿಯಾದರು ಎಂದರು.

ಈ ಸಂದರ್ಭದಲ್ಲಿ ದೆಹಲಿಯ ಗಾಂಧಿಭವನದ ಕಾರ್ಯದರ್ಶಿ ಸುರೇಂದ್ರ ಕುಮಾರ್, ಬೆಂಗಳೂರು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. [illegible] ಕೃಷ್ಣ, ಕಾರ್ಯದರ್ಶಿ ಪ್ರೊ. ಜಿ. ಮಲ್ಲೇಪುರಂ [illegible] ಮತ್ತಿತರರು ಉಪಸ್ಥಿತರಿದ್ದರು.

ವಿಜಯವಾಣಿ
BANGALORE

ಗುರುವಾರ
19 ಡಿಸೆಂಬರ್ 2013

# ಸಚಿವರಿಗೂ ಭೇಷ್ ಅಂದ್ರು ಭಾರದ್ವಾಜ್

## ಜನತೆಯ ಹಿತದೃಷ್ಟಿಯಿಂದ ಸರ್ಕಾರದ ವಿರುದ್ಧ ಟೀಕೆ

ಬೆಂಗಳೂರು: ಇತ್ತೀಚೆಗಷ್ಟೇ ಮುಖ್ಯಮಂತ್ರಿಯ ಕಾರ್ಯವೈಖರಿಯನ್ನು ಮಾತ್ರ ಹೊಗಳುತ್ತಿದ್ದ ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಇದೀಗ ಸಚಿವರ ಕಾರ್ಯ ವೈಖರಿಯನ್ನು ಮನಸಾರೆ ಹೊಗಳುವ ಮೂಲಕ ಎಲ್ಲರನ್ನು ಅಚ್ಚರಿಪಡಿಸಿದ್ದಾರೆ.

ಬುಧವಾರ ಮಂಡೇಲಾ ಅವರಿಗೆ ಶ್ರದ್ಧಾಂಜಲಿ ಸಲ್ಲಿಸಲು ಏರ್ಪಡಿಸಲಾಗಿದ್ದ ಕಾರ್ಯಕ್ರಮದ ನಂತರ ಸುದ್ದಿಗಾರರೊಂದಿಗೆ ಮಾತನಾಡಿದ ರಾಜ್ಯಪಾಲರು, ತಾವು ಜನತೆಯ ಹಿತದೃಷ್ಟಿಯಿಂದ ಸರ್ಕಾರದ ಮೇಲೆ ಟೀಕೆ ಮಾಡುತ್ತೇನೆಯೇ ವಿನಃ ಸಚಿವರ ಮೇಲಿನ ವೈಯಕ್ತಿಕ ದ್ವೇಷದಿಂದಲ್ಲ ಎಂದು ಸ್ಪಷ್ಟಪಡಿಸಿದರು.

ಸಿಇಟಿ ಪರೀಕ್ಷೆ ನೂತನ ಕಾಯ್ದೆ ಜಾರಿ ಸಂಬಂಧ ತಮ್ಮ ವ್ಯಾಪ್ತಿಗೆ ಬರುವುದಿಲ್ಲ, ಸರ್ಕಾರ ವಿದ್ಯಾರ್ಥಿಗಳಿಗಾಗುವ ತೊಂದರೆಯ ಈ ವಿಚಾರದಲ್ಲಿ ಸೂಕ್ತ ನಿರ್ಧಾರ ಬಗ್ಗೆ ಗಮನ ಸೆಳೆದಾಗ, ಈ ವಿಷಯ ತೆಗೆದುಕೊಳ್ಳಲಿದೆ ಹೇಳಿದರು.



ಗಾಂಧಿ ಭವನದಲ್ಲಿ ಬುಧವಾರ ಏರ್ಪಡಿಸಿದ್ದ ನೆಲ್ಸನ್ ಮಂಡೇಲಾ ಶ್ರದ್ಧಾಂಜಲಿ. ಕಾರ್ಯಕ್ರಮದಲ್ಲಿ ರಾಜ್ಯಪಾಲ ಹಂಸರಾಜ ಭಾರದ್ವಾಜ್, ಹೊ. ಶ್ರೀನಿವಾಸಯ್ಯ, ಸಚಿವ ಎಚ್.ಕೆ. ಪಾಟೀಲ್ ಪುಷ್ಪ ನಮನ ಸಲ್ಲಿಸಿದರು.

### ಮಂಡೇಲಾ ಶ್ರೇಷ್ಠ ಮಾನವತಾವಾದಿ

ನೆಲ್ಸನ್ ಮಂಡೇಲಾ ಶ್ರೇಷ್ಠ ಮಾನವತಾವಾದಿ. ಅಪ್ಪಟ ಗಾಂಧಿವಾದಿ ಮಂಡೇಲಾ ದಕ್ಷಿಣಾ ಆಫ್ರಿಕಾದಲ್ಲಿ ವರ್ಣಬೇಧ ನೀತಿ ವಿರುದ್ಧ ಹೋರಾಡಿ ಕರಿಯರು ಗೌರವದಿಂದ ಬಾಳುವಂತೆ ಮಾಡಿದ್ದಾರೆ ಎಂದು ರಾಜ್ಯಪಾಲ ಹಂಸರಾಜ ಭಾರದ್ವಾಜ್ ಹೇಳಿದರು.

ಗಾಂಧಿ ಶಾಂತಿ ಪ್ರತಿಷ್ಠಾನ ಏರ್ಪಡಿಸಿದ್ದ ಮಂಡೇಲಾಗೆ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಮಾತನಾಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ. ಶ್ರೀನಿವಾಸಯ್ಯ, ಸಚಿವ ಎಚ್.ಕೆ. ಪಾಟೀಲ್, ಗಾಂಧಿ ಶಾಂತಿ ಪ್ರತಿಷ್ಠಾನದ ಸುರೇಂದ್ರ ಕುಮಾರ್, ಪ್ರತಿಷ್ಠಾನ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ ಇದ್ದರು.

ಉದಯವಾಣಿ

ಗುರುವಾರ | ಡಿಸೆಂಬರ್ | 19 | 20

ಶ್ರದ್ಧಾಂಜಲಿ

# ಮಂಡೇಲಾ ಗಾಂಧಿ ತತ್ವದ ಪ್ರತಿಪಾದಕ

## ಶಾಂತಿ, ಅಹಿಂಸೆ ತತ್ವಗಳ ಮೂಲಕ ಅಸಮಾನತೆ ವಿರುದ್ಧ ಹೋರಾಟ: ರಾಜ್ಯಪಾಲ

ಬೆಂಗಳೂರು: ಶಾಂತಿ ಮತ್ತು ಅಹಿಂಸೆ ಎಂಬ ಎರಡು ತತ್ವಗಳ ಮೂಲಕ ಅಸಮಾನತೆಯ ವಿರುದ್ಧ ಹೋರಾಟ ನಡೆಸಿದ ನೆಲ್ಸನ್ ಮಂಡೇಲಾ ಅವರು ಗಾಂಧೀಜಿ ತತ್ವಗಳ ಶ್ರೇಷ್ಠ ಪ್ರತಿಪಾದಕರಾಗಿದ್ದರು ಎಂದು ರಾಜ್ಯಪಾಲ ಎಚ್.ಆರ್. ಭಾರದ್ವಾಜ್ ಬಣ್ಣಿಸಿದ್ದಾರೆ.

ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಸಂಯುಕ್ತಾಶ್ರಯದಲ್ಲಿ ಬುಧವಾರ ಗಾಂಧಿಭವನದಲ್ಲಿ ಏರ್ಪಡಿಸಿದ್ದ 'ನೆಲ್ಸನ್ ಮಂಡೇಲಾ ಅವರ ಶ್ರದ್ಧಾಂಜಲಿ' ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

ಜಗತ್ತಿನ ಬೇರೆ ಬೇರೆ ದೇಶದವರು ಗಾಂಧೀಜಿ ಅವರನ್ನು ಅನುಕರಿಸುತ್ತಿದ್ದಾರೆ. ಆದರೆ, ಭಾರತದಲ್ಲಿಯೇ ಗಾಂಧೀಜಿ ಅವರನ್ನು ಮರೆಯಲಾಗುತ್ತಿದೆ. ತಾನು ಕೇಂದ್ರ ಕಾನೂನು ಸಚಿವನಾಗಿದ್ದಾಗ ದಕ್ಷಿಣ ಆಫ್ರಿಕಾದಲ್ಲಿ ಸೆರೆವಾಸದಲ್ಲಿದ್ದ ನೆಲ್ಸನ್ ಮಂಡೇಲಾ ಅವರನ್ನು ಭೇಟಿಯಾಗುವ ಅವಕಾಶ ದೊರೆತಿತ್ತು. ಅಲ್ಲಿಯೇ ಸತ್ಯಾಗ್ರಹನಿರತರಾಗಿದ್ದ ಅವರು ಗಾಂಧೀಜಿಯ ತತ್ವಗಳಾದ ಸತ್ಯ, ಶಾಂತಿ ಮತ್ತು ಅಹಿಂಸೆಯಿಂದ ತಮ್ಮ ಕಪ್ಪು ಜನರಿಗೆ ನ್ಯಾಯವನ್ನು ದೊರಕಿಸಿಕೊಡಿಸುವ ಹೋರಾಟದಲ್ಲಿ ತೊಡಗಿದ್ದರು. ಅವರು ತಮ್ಮ ಹೋರಾಟವನ್ನು ಬಿಳಿಯರ ವಿರುದ್ಧ ಎನ್ನದೇ ಅಸಮಾನತೆ ವಿರುದ್ಧ ಎಂದು ಬಣ್ಣಿಸಿದ್ದರು ಎಂದು ಸ್ಮರಿಸಿದರು. ದೇಶದಲ್ಲಿ ಹಲವು ಮಹಾನ್ ಹೋರಾಟಗಾರರು ಕ್ರಾಂತಿಕಾರಿ ಮಾರ್ಗದ ಮೂಲಕ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದರು. ಆದರೆ, ಗಾಂಧೀಜಿ ಅವರು ಅಹಿಂಸೆ ಮತ್ತು ಸತ್ಯದ ಮಾರ್ಗದಿಂದ ಸ್ವಾತಂತ್ರ್ಯ ಪಡೆಯಲು ಸಾಧ್ಯ ಎಂದು ಪ್ರತಿಪಾದಿಸಿದ್ದರು. ಆದರೆ, ಇಂದಿನ ವಿದ್ಯಾರ್ಥಿಗಳು ಜವಹರಲಾಲ್ ನೆಹರು, ಗಾಂಧೀಜಿ, ಅಂಬೇಡ್ಕರ್ ಅವರನ್ನು ಸ್ಮರಿಸುತ್ತಿಲ್ಲ. ಆದರೆ, ಅವರ ತತ್ವಗಳು ಎಂದೆಂದಿಗೂ ಪ್ರಸ್ತುತ ಅವರ ಆದರ್ಶಗಳನ್ನು ಎಲ್ಲಾ ತರುಣರು ಪಾಲಿಸಬೇಕು ಎಂದು ಕಿವಿಮಾತು ಹೇಳಿದರು.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ ಮಾತನಾಡಿ, ಗಾಂಧೀಜಿ ಅವರ ತತ್ವಗಳನ್ನು ಜಗತ್ತಿಗೆ ಮತ್ತೊಮ್ಮೆ ಸಾರಿದವರು ನೆಲ್ಸನ್ ಮಂಡೇಲಾ. ಮಾನವೀಯ ಅನುಕಂಪವನ್ನು ಹೊಂದಿದ್ದ ಅವರ ಗುಣ ಎಲ್ಲರಿಗೂ ಆದರ್ಶನೀಯ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ.ಶ್ರೀನಿವಾಸಯ್ಯ ಮಾತನಾಡಿ, ನೆಲ್ಸನ್ ಮಂಡೇಲಾ ಅವರನ್ನು ಸೆರೆಮನೆಗೆ ದೂಡಿದವರ ವಿರುದ್ಧ ಪ್ರತೀಕಾರ ತೀರಿಸಿಕೊಳ್ಳದೆ ಅಧ್ಯಕ್ಷರಾಗಿದ್ದ ವೇಳೆ ಕ್ಷಮಾಪಣೆ ನೀಡಿ ಮಾನವೀಯತೆ ಮೆರೆದ ಆದರ್ಶ ವ್ಯಕ್ತಿ ಎಂದು ಬಣ್ಣಿಸಿದರು.



ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಸಂಯುಕ್ತಾಶ್ರಯದಲ್ಲಿ ಬುಧವಾರ ಗಾಂಧಿಭವನದಲ್ಲಿ ಏರ್ಪಡಿಸಿದ್ದ ನೆಲ್ಸನ್ ಮಂಡೇಲಾ ಅವರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ರಾಜ್ಯಪಾಲ ಎಚ್.ಆರ್. ಭಾರದ್ವಾಜ್, ಸಚಿವ ಎಚ್.ಕೆ. ಪಾಟೀಲ ಪುಷ್ಪನಮನ ಸಲ್ಲಿಸಿದರು.

19.12.2013

# ವರ್ಣಭೇದ ರೋಗಕ್ಕೆ ಮಂಡೇಲಾ ಔಷಧ: ರಾಜ್ಯಪಾಲ

ಬೆಂಗಳೂರು, ಡಿ.18: ತನ್ನ ನಾಡಿನಲ್ಲಿ ತಲೆ ಎತ್ತಿದ ಅಮಾನುಷ ವರ್ಣಭೇದ ನೀತಿಗೆ ಸಮಾನತೆಯ ಔಷಧ ಕಂಡುಹಿಡಿದು ಕಪ್ಪುಜನರಿಗೆ ಸ್ವಾತಂತ್ರ್ಯ ತಂದುಕೊಟ್ಟ ನೆಲ್ಸನ್ ಮಂಡೇಲಾ ವಿಶ್ವಮಾನವ ಎಂದು ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಅಭಿಪ್ರಾಯಪಟ್ಟರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಸಂಯುಕ್ತ ಆಶ್ರಯದಲ್ಲಿ ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ 'ವಿಶ್ವಮಾನವ ನೆಲ್ಸನ್ ಮಂಡೇಲಾ ಶ್ರದ್ಧಾಂಜಲಿ' ಕಾರ್ಯಕ್ರಮದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಯುವಕನಾಗಿ ವರ್ಣಭೇದ ನೀತಿಯ ವಿರುದ್ಧದ ಹೋರಾಟಕ್ಕೆ ಜಿಗಿದ ಮಂಡೇಲಾ, ತಮ್ಮ ಜೀವನದ ಅಮೂಲ್ಯ ಕಾಲವನ್ನು ಸೆರೆಮನೆಯಲ್ಲಿ ಕಳೆದರೂ ತಾಳ್ಮೆ ಕಳೆದುಕೊಳ್ಳದೆ ಅಲ್ಲಿಂದಲೇ ಆಫ್ರಿಕದ ಸ್ವಾತಂತ್ರ್ಯ ಹೋರಾಟಕ್ಕೆ ದೊಡ್ಡ ಮಟ್ಟದ ಪ್ರೇರಣೆಯನ್ನು ಒದಗಿಸಿದರು ಎಂದು ಅವಲೋಕಿಸಿದರು.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದ್ದ ಗಾಂಧೀಜಿಯವರ ಹೋರಾಟದ ಮಾರ್ಗವನ್ನು ಗೌರವಿಸಿಯೂ ಭಗತ್‌ಸಿಂಗ್, ಸುಖದೇವ್, ರಾಜಗುರು, ಬೋಸ್ ಮುಂತಾದವರು ಕ್ರಾಂತಿಕಾರಿ ಮಾರ್ಗವನ್ನು ತುಳಿದರು. ಅಂತೆಯೇ ಆಫ್ರಿಕದಲ್ಲಿಯೂ ಹಲವು ಹೋರಾಟಗಾರರು ಕ್ರಾಂತಿಕಾರಿ ಮಾರ್ಗವನ್ನು ತುಳಿದರು. ಆದರೆ, ಕೊನೆಗೆ ಮಂಡೇಲಾ ನಾಂದಿ ಹಾಡಿದ ಸಮಾನತೆಯ ಅಹಿಂಸಾ ಹೋರಾಟದ ಮೂಲಕ ಆಫ್ರಿಕಾದ ಸ್ವಾತಂತ್ರ್ಯದ ಬಾಗಿಲು ತೆರೆಯಿತು.

ಗಾಂಧೀಜಿ ತಮ್ಮ ಜೀವಮಾನವಿಡೀ ಮುಸ್ಲಿಮ್ ಹಿಂದೂ ಜನರ ನಡುವೆ ಸಹೋದರತ್ವ ಬೆಳೆಸುವ ಕೆಲಸವನ್ನು ಮಾಡುತ್ತಾ ಬಂದರು. ಅವರೆಂದೂ ಕೋಮುದ್ವೇಶಕ್ಕೆ ಕಾರಣವಾದ ಮಾತನಾಡಲಿಲ್ಲ. ನೆಲ್ಸನ್ ಮಂಡೇಲಾ ಕೂಡ ಸ್ವಾತಂತ್ರ್ಯಾನಂತರ ಆಫ್ರಿಕದ ಮೊತ್ತ ಮೊದಲ ರಾಷ್ಟ್ರಾಧ್ಯಕ್ಷರಾದರೂ ಬ್ರಿಟಿಷರ ವಿರುದ್ಧ ಹಗೆ ಸಾಧಿಸಲಿಲ್ಲ. ಅವರನ್ನು ಮೂಲ ಹುದ್ದೆಗಳಿಂದ ಕೆಳಗಿಳಿಸುವ ಸೇಡಿನ ಕೆಲಸವನ್ನು ಮಾಡದೆ ಯಾವುದೇ ದೇಶಕ್ಕೆ ಅಮೂಲ್ಯವಾದ ಸೌಹಾರ್ದತೆಯ ಅಡಿಪಾಯವನ್ನು ಹಾಕಿದರು ಎಂದು ಭಾರದ್ವಾಜ್ ನೆನಪಿಸಿಕೊಂಡರು.

ಸಾಮರಸ್ಯದಲ್ಲಿಯೆ ಭಾರತ ಮತ್ತು ಆಫ್ರಿಕ ದೇಶಗಳ ಬಹುಧರ್ಮೀಯತೆ ಹಾಗೂ ಬಹುಜನಾಂಗೀಯ ಸಂಸ್ಕೃತಿಗಳ ಅಸ್ತಿತ್ವ ಹಾಗೂ ವೈವಿಧ್ಯತೆಯ ಗುಟ್ಟು ಅಡಗಿದೆ. ಇದಕ್ಕೆ ಗಾಂಧೀಜಿ, ಮಾರ್ಟಿನ್ ಲೂಥರ್ ಕಿಂಗ್, ನೆಲ್ಸನ್ ಮಂಡೇಲಾ ಇತ್ಯಾದಿ ಮಾನವತಾವಾದಿ ಚಿಂತಕರ ಕೊಡುಗೆ ದೊಡ್ಡದಿದೆ. ಇಂದಿಗೂ ಒಬಾಮ ಮತ್ತಿತರ ಜಾಗತಿಕ ನಾಯಕರಿಗೆ ಇವರು ಪ್ರೇರಣೆಯಾಗಿದ್ದಾರೆ ಎಂದು ಅಭಿಪ್ರಾಯಪಟ್ಟರು.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಸಚಿವ ಎಚ್.ಕೆ.ಪಾಟೀಲ್ ಮಾತನಾಡಿ, ತಮ್ಮ ಜೀವನದ ಅಮೂಲ್ಯವಾದ 26 ವರ್ಷಗಳ ಕಾಲ ಜೈಲುವಾಸ ಅನುಭವಿಸಿದರೂ ಮಂಡೇಲಾ ವರ್ಣಭೇದ ನೀತಿಯ ವಿರುದ್ಧ ಹೋರಾಡಿ ಸ್ವಾತಂತ್ರ್ಯ ತಂದು ಕೊಡುವ ಮೂಲಕ ಗಾಂಧೀಜಿಯವರಂತೆ ಪ್ರಸ್ತುತ ಮಾದರಿಯಾಗಿದ್ದಾರೆ ಎಂದು ಅಭಿಪ್ರಾಯಪಟ್ಟರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೋ.ಶ್ರೀನಿವಾಸಯ್ಯ ಮಾತನಾಡಿ, ಅಪಾರ ಜನ ಬೆಂಬಲದೊಂದಿಗೆ ಸ್ವಾತಂತ್ರ್ಯಾನಂತರದ ಆಫ್ರಿಕ ರಾಷ್ಟ್ರಾಧ್ಯಕ್ಷರಾದ ಮಂಡೇಲಾ ಕೇವಲ ಐದು ವರ್ಷಗಳಲ್ಲಿಯೆ ತಮ್ಮ ಅಧಿಕಾರವನ್ನು ಸ್ವಇಚ್ಛೆಯಿಂದ ತ್ಯಜಿಸಿದರು. ಭಾರತೀಯ ರಾಜಕಾರಣಿಗಳು ಇದನ್ನು ಅನುಸರಿಸಬೇಕು ಎಂದು ಕಿವಿಮಾತು ಹೇಳಿದರು.

ಕಾರ್ಯಕ್ರಮದಲ್ಲಿ ಹೊಸದಿಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಸುರೇಂದ್ರಕುಮಾರ್ ರಾಜ್ಯ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವುಡೇ. ಪಿ.ಕೃಷ್ಣ ಮತ್ತಿತರರು ಹಾಜರಿದ್ದರು.

'ವಿಶ್ವಮಾನವ ನೆಲ್ಸನ್ ಮಂಡೇಲಾ ಶ್ರದ್ಧಾಂಜಲಿ' ಕಾರ್ಯಕ್ರಮ



## ಸರಕಾರದ ಕಾರ್ಯವೈಖರಿಗೆ ರಾಜ್ಯಪಾಲರಿಂದ ಪೂರ್ಣ ಅಂಕ

ಸರಕಾರ ಅಸ್ತಿತ್ವಕ್ಕೆ ಬಂದು ಇನ್ನೂ ಕೆಲವೆ ತಿಂಗಳಾಗಿವೆ. ಮುಖ್ಯಮಂತ್ರಿ ಹಾಗೂ ಸರಕಾರ ಚೆನ್ನಾಗಿಯೆ ಕೆಲಸ ಮಾಡುತ್ತಿದೆ. ಕರ್ನಾಟಕ ಕೆಟ್ಟ ರಾಜ್ಯವಲ್ಲ. ಶಕ್ತಿಯುತ ರಾಜ್ಯ ಎಂದು ರಾಜ್ಯಪಾಲ ಶ್ಲಾಘಿಸಿದರು.

ಕಳಂಕಿತರಿಗೆ ಸಚಿವ ಸ್ಥಾನ ಸಿಗುತ್ತದೆಯೇ ಎಂಬ ಪ್ರಶ್ನೆಗೆ, ದೂರು ಬಂದಿದ್ದು ಲಾಡ್ ವಿರುದ್ಧದ ದೂರನ್ನು ನಾನು ಪರಿಶೀಲಿಸಿದ್ದೇನೆ ಎಂದರು. ಡಿ.ಕೆ.ಶಿವಕುಮಾರ್ ಸಚಿವರಾಗುತ್ತಾರೆಯೆ ಎಂದು ಕೇಳಿದ ಪ್ರಶ್ನೆಗೆ, ಶಿವಕುಮಾರ್ ಇನ್ನೂ ಶಾಸಕರು ಎಂದರು. ಸಿಇಟಿ ಕುರಿತು ಜನ ಪ್ರತಿಭಟಿಸುತ್ತಿರುವುದನ್ನು ನಾನೂ ನೋಡಿದ್ದೇನೆ. ಸರಕಾರ ಈ ಕುರಿತು ಇನ್ನೊಮ್ಮೆ ಪರಿಶೀಲಿಸಲಿ. ಆದರೆ ನಾನು ಸರಕಾರಕ್ಕೆ ಅದು ಮಾಡಿ ಇದು ಮಾಡಿ ಎಂದು ಹೇಳುವುದಿಲ್ಲ ಎಂದರು.

18.12.2013 ಈ ಸಂಜೆ



ಗಾಂಧಿ ಶಾಂತಿ ಪ್ರತಿಷ್ಠಾನದಲ್ಲಿ ಹಮ್ಮಿಕೊಂಡಿದ್ದ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ದಕ್ಷಿಣ ಆಫ್ರಿಕಾದ ಹೋರಾಟಗಾರ ಡಾ. ನೆಲ್ಸನ್ ಮಂಡೇಲ ಅವರ ಭಾವಚಿತ್ರಕ್ಕೆ ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಪುಷ್ಪ ನಮನ ಸಲ್ಲಿಸಿದರು. ಪ್ರತಿಷ್ಠಾನದ ಕಾರ್ಯದರ್ಶಿ ಸುರೇಂದ್ರ ಕುಮಾರ್, ಅಧ್ಯಕ್ಷ ಓ. ಶ್ರೀನಿವಾಸಯ್ಯ ಹಾಜರಿದ್ದರು.

# ಸರ್ಕಾರ ಕೊಂಡಾಡಿದ ರಾಜ್ಯಪಾಲ ಭಾರದ್ವಾಜ್

ಬೆಂಗಳೂರು, ಡಿ.18- ಈವರೆಗೂ ಸರ್ಕಾರವನ್ನು ಟೀಕಿಸುತ್ತಿದ್ದ ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಇದ್ದಕ್ಕಿದ್ದಂತೆ ಯೂಟರ್ನ್ ಪಡೆದು ಮುಖ್ಯಮಂತ್ರಿ ಸಿದ್ದರಾಮಯ್ಯ ಮತ್ತು ಸಚಿವರು ಉತ್ತಮವಾಗಿ ಕೆಲಸ ಮಾಡುತ್ತಿದ್ದಾರೆ ಎಂದು ಹೊಗಳಿದ್ದಾರೆ.

ನಗರದ ಗಾಂಧಿಭವನದಲ್ಲಿಂದು ದಕ್ಷಿಣ ಆಫ್ರಿಕಾದ ಮಾಜಿ ಅಧ್ಯಕ್ಷ ನೆಲ್ಸನ್ ಮಂಡೇಲಾ ಅವರ ಶ್ರದ್ಧಾಂಜಲಿ ಕಾರ್ಯಕ್ರಮದ ನಂತರ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಸಿದ್ದರಾಮಯ್ಯನವರ ಸಂಪುಟದಲ್ಲಿ ಒಬ್ಬ ಸಚಿವರ ವಿರುದ್ಧ ದೂರು ಇತ್ತು. ಅದರಂತೆ ಅವರನ್ನು ಕೈಬಿಡಲಾಗಿದೆ. ಉಳಿದಂತೆ ಯಾರ ವಿರುದ್ಧವೂ ದೂರುಗಳಿಲ್ಲ. ಎಲ್ಲರೂ ಚೆನ್ನಾಗಿಯೇ ಕೆಲಸ ಮಾಡುತ್ತಿದ್ದಾರೆ ಎಂದರು.

ಸರ್ಕಾರ ಹೊಸದಾಗಿ ಅಸ್ತಿತ್ವಕ್ಕೆ ಬಂದಿದೆ. ಅದಕ್ಕೆ ಕೆಲಸ ಮಾಡಲು ಕಾಲವಕಾಶ ನೀಡಬೇಕು ಎಂದು ಅಭಿಪ್ರಾಯ ವ್ಯಕ್ತಪಡಿಸಿದ ಅವರು, ಕರ್ನಾಟಕ ಶಕ್ತಿ ಶಾಲಿ ರಾಜ್ಯ. ಇನ್ನಷ್ಟು ಆರ್ಥಿಕ ಸಂಪನ್ಮೂಲ ವೃದ್ಧಿಯಾಗಬೇಕು. ಇದಕ್ಕೆ ತಾವೂ ಸಹಕರಿಸುವುದಾಗಿ ಹೇಳಿದರು.

ಯಾವುದೇ ಸಚಿವರ ಮೇಲೆ ನನಗೆ ವೈಯಕ್ತಿಕ ದ್ವೇಷ ಇಲ್ಲ. ಜನರಿಗೆ ಅನುಕೂಲವಾಗಲಿ ಎಂದು ಸಲಹೆ ನೀಡುತ್ತೇನೆ ಎಂದು ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ನೆಲ್ಸನ್ ಮಂಡೇಲಾ ಮಹಾನ್ ಮಾನವತಾವಾದಿ ಹಾಗೂ ಅಪ್ಪಟ ಗಾಂಧಿ ಅನುಯಾಯಿಯಾಗಿದ್ದರು.

ಮಂಡೇಲಾ ಅವರ ಶ್ರದ್ಧಾಂಜಲಿ ಕಾರ್ಯಕ್ರಮಕ್ಕೆ ಸಚಿವರು ಬಾರದೇ ಇರುವುದಕ್ಕೆ ವಿಷಾದ ವ್ಯಕ್ತಪಡಿಸಿದರು. ವರ್ಣಬೇಧ ವಿರುದ್ಧ ಹೋರಾಡಿದ ಮಂಡೇಲಾ ಅಧಿಕಾರಕ್ಕೆ ಬಂದಾಗ ಬಿಳಿಯರನ್ನು ದ್ವೇಷಿಸದೆ ಅವರ ವಿಶ್ವಾಸಕ್ಕೆ ತೆಗೆದುಕೊಂಡು ಕೆಲಸ ನಿರ್ವಹಿಸಿದರು. ಭಗತ್ ಸಿಂಗ್, ರಾಜಗುರು, ಸುಖದೇವ್ ಅವರಂತಹ ಹೋರಾಟಗಾರರಿದ್ದರೂ ಸಹ ಗಾಂಧೀಜಿ ಅವರ ನೆಚ್ಚಿನ ನಾಯಕರಾಗಿದ್ದರು. ನೆಹರು, ಮಂಡೇಲಾ ಹಾಗೂ ಬಾರಕ್ ಒಬಾಮ ಸಹ ಗಾಂಧಿ ಅನುಯಾಯಿಗಳು ಎಂದು ಹೇಳಿದರು.

ಸಮಾಜದಲ್ಲಿ ಇಂದಿಗೂ ಕೋಮುವಾದ, ಜಾತಿವಾದ ಜೀವಂತವಾಗಿದ್ದು ಅಸಮಾನತೆಗೆ ಕಾರಣವಾಗಿದೆ. ಸಾಮಾಜಿಕ ಜಾಗೃತಿ ಮತ್ತು ಬದಲಾವಣೆಗಳು ಅಗತ್ಯ. ಸರ್ಕಾರ ಜನಸಾಮಾನ್ಯರಿಗೆ ಸ್ಪಂದಿಸುವಂತಹ ಆಡಳಿತ ನೀಡಬೇಕು ಎಂದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೊ.ಶ್ರೀನಿವಾಸಯ್ಯ ಮಾತನಾಡಿ, ಗಾಂಧಿವಾದ ನಮ್ಮ ನಿತ್ಯಜೀವನದ ಅವಿಭಾಜ್ಯ ಅಂಗವಾಗಬೇಕು, ಅವರ ತತ್ವಾದರ್ಶಗಳನ್ನು ಅಳವಡಿಸಿಕೊಂಡ ಮಂಡೇಲಾ ಜಗತ್ತಿನ ದಾರ್ಶನಿಕರಲ್ಲಿ ಒಬ್ಬರಾದರು.

ಸಚಿವ ಎಚ್.ಕೆ.ಪಾಟೀಲ್, ದೆಹಲಿಯ ಗಾಂಧಿಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಸುರೇಂದ್ರ ಕುಮಾರ್, ಗಾಂಧಿ ಪ್ರತಿಷ್ಠಾನದ ವೂಡೆ ಪಿ.ಕೃಷ್ಣ ಮತ್ತಿತರರಿದ್ದರು.

ಬೆಂಗಳೂರು । ಸೋಮವಾರ 16 । ಡಿಸೆಂಬರ್ 2013

ಕನ್ನಡಪ್ರಭ



ದಿ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಸಭಾಂಗಣದಲ್ಲಿ ನಾರಾಯಣ ನೇತ್ರಾಲಯದಿಂದ ಏರ್ಪಡಿಸಿದ್ದ ಸ್ವಯಂ ರಕ್ತದಾನ ಮತ್ತು ನೇತ್ರ ತಪಾಸಣಾ ಶಿಬಿರದಲ್ಲಿ ಸಚಿವ ದಿನೇಶ್ ಗುಂಡೂರಾವ್ ನೇತ್ರ ಪರೀಕ್ಷೆ ಮಾಡಿಸಿಕೊಳ್ಳುತ್ತಿರುವುದು. ಪೂಡೆ ಪಿ.ಕೃಷ್ಣ, ರಾಜು ಚಂದ್ರಶೇಖರ್ ಇದ್ದರು.

ಉದಯವಾಣಿ

ಸೋಮವಾರ | ಡಿಸೆಂಬರ್ | 16 | 2013

## ಉಚಿತ ತಪಾಸಣೆ

ನಗರದ ಇನ್ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಸಭಾಂಗಣದಲ್ಲಿ ಭಾನುವಾರ ಆಯೋಜಿಸಿದ್ದ ಉಚಿತ 'ಮಲ್ಟಿ ಸ್ಪೆಷಾಲಿಟಿ ಹೆಲ್ತ್ ಚೆಕ್ ಅಪ್' ಶಿಬಿರ ಉದ್ಘಾಟಿಸಿದ ಆಹಾರ ಮತ್ತು ನಾಗರಿಕ ಪೂರೈಕೆ ಸಚಿವ ದಿನೇಶ್ ಗುಂಡೂರಾವ್ ತಮ್ಮ ನೇತ್ರ ಪರೀಕ್ಷೆ ಮಾಡಿಸಿಕೊಂಡರು. ನಾರಾಯಣ ನೇತ್ರಾಲಯ ಹಾಗೂ ವಿಕ್ರಂ ಆಸ್ಪತ್ರೆ ಈ ಶಿಬಿರವನ್ನು ಆಯೋಜಿಸಿದ್ದವು.





## ನೇತ್ರ ಪರೀಕ್ಷೆ..

ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್‌ನಲ್ಲಿ ಕರ್ನಾಟಕ ಸ್ವಯಂಪ್ರೇರಿತ ರಕ್ತ ದಾನಿಗಳ ಸಂಘ ಹಾಗೂ ವಿಕ್ರಂ ಆಸ್ಪತ್ರೆ ಮತ್ತು ನಾರಾಯಣ ನೇತ್ರಾಲಯ ಸಹಯೋಗದಲ್ಲಿ ಆಯೋಜಿಸಿದ್ದ ಉಚಿತ ಆರೋಗ್ಯ ತಪಾಸಣಾ ಶಿಬಿರ ಉದ್ಘಾಟಿಸಿ ಸಚಿವ ದಿನೇಶ್ ಗುಂಡೂರಾವ್ ನೇತ್ರ ಪರೀಕ್ಷೆ ಮಾಡಿಸಿಕೊಂಡರು.

ಸೋಮವಾರ
16 ಡಿಸೆಂಬರ್ 2013
ವಿಜಯವಾಣಿ
BANGALORE

ಸಂಜೆವಾಣಿ

ಭಾನುವಾರ
15 ಡಿಸೆಂಬರ್ 2013



ನಗರದ ಇಂಜಿನಿಯರ್ ಸಂಘ, ವಿಕ್ರಮ್ ಆಸ್ಪತ್ರೆ ಹಾಗೂ ನಾರಾಯಣ ನೇತ್ರಾಲಯ ಸಹಯೋಗದಲ್ಲಿ ಡಾ. ಬಿ.ಆರ್. ಅಂಬೇಡ್ಕರ್ ಬೀದಿಯಲ್ಲಿಂದು ಏರ್ಪಡಿಸಿದ್ದ ಉಚಿತ ನೇತ್ರ ಚಿಕಿತ್ಸಾ ಶಿಬಿರದಲ್ಲಿ ಸಚಿವ ದಿನೇಶ್ ಗುಂಡೂರಾವ್ ಅವರನ್ನು ವೈದ್ಯರು ತಪಾಸಣೆ ಮಾಡುತ್ತಿರುವುದು. ಪೂಡೇ ಪಿ. ಕೃಷ್ಣ ಡಾ. ರಾಜುಚಂದ್ರಶೇಖರ್ ಮತ್ತಿತರರು ಇದ್ದಾರೆ

ಈ ಸಂಜೆ

ಭಾನುವಾರ, 15-12-2013



ಇಂಜಿನಿಯರ್ಸ್ ಸಂಸ್ಥೆ, ರಕ್ತದಾನಿಗಳ ಒಕ್ಕೂಟ, ವಿಕ್ರಮ್ ಆಸ್ಪತ್ರೆ ಹಾಗೂ ನಾರಾಯಣ ನೇತ್ರಾಲಯ ಸಹಭಾಗಿತ್ವದಲ್ಲಿ ಹಮ್ಮಿಕೊಳ್ಳಲಾಗಿದ್ದ ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ಆಹಾರ ಸಚಿವ ದಿನೇಶ್ ಗುಂಡೂರಾವ್, ರಕ್ತದಾನಿಗಳ ಒಕ್ಕೂಟದ ಅಧ್ಯಕ್ಷ ರಾಜು ಚಂದ್ರಶೇಖರ್, ಇಂಜಿನಿಯರ್ಸ್ ಸಂಸ್ಥೆಯ ಕರ್ನಾಟಕ ವಿಭಾಗದ ಅಧ್ಯಕ್ಷ ವೂಡೆ ಪಿ. ಕೃಷ್ಣ ಮತ್ತಿತರರು ಹಾಜರಿದ್ದರು.

ವಿಜಯ ಕರ್ನಾಟಕ
ಸೋಮವಾರ,9 ಡಿಸೆಂಬರ್ 2013, ಬೆಂಗಳೂರು

# ಸಮುದಾಯಕ್ಕೆ ಸ್ಪಷ್ಟ ದೃಷ್ಟಿಕೋನ ಅಗತ್ಯ: ಸ್ವಾಮೀಜಿ

**ಯಲಹಂಕ:** ಒಕ್ಕಲಿಗರ ಸಂಘದ ಚುನಾವಣೆಗೆ ಕೋಟಿಗಟ್ಟಲೆ ಖರ್ಚು ಮಾಡಲಾಗುತ್ತಿದ್ದು, ಆ ದುಡ್ಡು ಎಲ್ಲಿಂದ ಬರುತ್ತದೆ ಎಂದು ಆದಿಚುಂಚನಗಿರಿ ಮಹಾಸಂಸ್ಥಾನಮಠದ ನಿರ್ಮಲಾನಂದನಾಥ ಸ್ವಾಮಿ ಪ್ರಶ್ನಿಸಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ ವಿದ್ಯಾಪೋಷಕರ ಸಂಘದ ಉದ್ಘಾಟನೆ ಹಾಗೂ ಎನ್. ಮುನಿಕೆಂಪಣ್ಣನವರ 'ಸಾರ್ಥಕ ಬದುಕಿಗೆ ಸಾವಿರಾರು ಸೂಕ್ತಿಗಳು' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಮಾತನಾಡುತ್ತಿದ್ದರು. "ಯಾವುದೇ ಸಮುದಾಯಕ್ಕೆ ಸ್ಪಷ್ಟ ದೃಷ್ಟಿಕೋನವಿದ್ದು, ಬೌದ್ಧಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ವಿಕಾಸ ಹೊಂದುವಂತ ಸ್ಥಿತಿ ಇದ್ದರೆ ಅಂಥ ಸಮಾಜದಿಂದ ಉತ್ತಮ ಕವಿ, ರಾಜಕಾರಣಿ, ಆಧ್ಯಾತ್ಮಿಕ ಗುರು ಹುಟ್ಟಿಬರುತ್ತಾನೆ," ಎಂದರು.

"ಒಂದು ಜಾತಿ ಸಮುದಾಯದಿಂದ ರಾಷ್ಟ್ರ ನಿರ್ಮಾಣ ಕಾರ್ಯ ಆಗುವುದಿಲ್ಲ. ಆಯಾ ಸಮುದಾಯ, ಆಯಾ ಜನಾಂಗದವರು ಅವರವರ ಜನರನ್ನು ಉತ್ತಮರನ್ನಾಗಿ ಮಾಡಿ ಮೌಲ್ಯಯುತ ಜನಾಂಗವನ್ನು ಕಟ್ಟಬೇಕು. ಹಾಗಾದರೆ ಮಾತ್ರ ಪ್ರಗತಿ ಹೊಂದಿದ ರಾಷ್ಟ್ರವಾಗಿ ಬೆಳೆಯಲಿದೆ," ಎಂದರು. ವಿಶ್ವನಾಥ್, ದೇವನಹಳ್ಳಿ ಶಾಸಕ ಪಿಳ್ಳಮುನಿಶಾಮಪ್ಪ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಾ. ವೂಡೆ. ಪಿ. ಕೃಷ್ಣ ಮಾತನಾಡಿದರು.

ವಿಕ ಚಿತ್ರಲೋಕ



ಯಲಹಂಕ ಉಪನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಎನ್. ಮುನಿಕೆಂಪಣ್ಣನವರ 'ಸಾರ್ಥಕ ಬದುಕಿಗೆ ಸಾವಿರಾರು ಸೂಕ್ತಿಗಳು' ಪುಸ್ತಕವನ್ನು ನಿರ್ಮಲಾನಂದನಾಥ ಸ್ವಾಮಿ ಬಿಡುಗಡೆಗೊಳಿಸಿದರು.

ಉದಯವಾಣಿ | ಭಾನುವಾರ | ಡಿಸೆಂಬರ್ | 8 | 2013

# 'ಸಾರ್ಥಕ ಬದುಕಿಗೆ ಸಾವಿರಾರು ಸೂಕ್ತಿಗಳು' ಪುಸ್ತಕ ಬಿಡುಗಡೆ



ಯಲಹಂಕ ಉಪನಗರದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಆದಿಚುಂಚನಗಿರಿ ಮಹಾಸಂಸ್ಥಾನಮಠದ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಅವರು ಎಸ್. ಮುನಿಕೆಂಪಣ್ಣನವರ 'ಸಾರ್ಥಕ ಬದುಕಿಗೆ ಸಾವಿರಾರು ಸೂಕ್ತಿಗಳು' ಪುಸ್ತಕ ಬಿಡುಗಡೆ ಮಾಡಿದರು.

ಯಲಹಂಕ: ಆಯಾ ಸಮುದಾಯ, ಆಯಾ ಜನಾಂಗದವರು ಅವರವರ ಜನರನ್ನು ಉತ್ತಮರನ್ನಾಗಿ ಮಾಡಿ ಮೌಲ್ಯಯುತ ಜನಾಂಗವನ್ನು ಸಮಾಜಕ್ಕೆ ಕೊಟ್ಟಾಗ ನಮ್ಮ ರಾಷ್ಟ್ರ ಬೇರೆ ದೇಶದ ದೃಷ್ಟಿಯಲ್ಲಿ ಪ್ರಗತಿ ಹೊಂದಿದ ರಾಷ್ಟ್ರವೆನಿಸಿಕೊಳ್ಳುತ್ತದೆ ಎಂದು ಆದಿಚುಂಚನಗಿರಿ ಮಹಾಸಂಸ್ಥಾನಮಠದ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಹೇಳಿದರು.

ಉಪನಗರದ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ ವಿದ್ಯಾಪೋಷಕರ ಸಂಪದ ಉದ್ಘಾಟನೆ ಹಾಗೂ ಎಸ್. ಮುನಿಕೆಂಪಣ್ಣನವರ ಸಾರ್ಥಕ ಬದುಕಿಗೆ ಸಾವಿರಾರು ಸೂಕ್ತಿಗಳು ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿದ ಅವರು, ಒಕ್ಕಲಿಗರ ಸಂಸ್ಥೆಯನ್ನು ಅಭಿವೃದ್ಧಿ ಮಾಡಲು ಹೋಗುವವರು ಕೆಟ್ಟ ಸಂಪ್ರದಾಯ ಸೃಷ್ಟಿ ಮಾಡಿ, ದುಡಿದಿರುವ ದುಡ್ಡನ್ನು ಕುಡಿಸಿ, ತಿನ್ನಿಸಿ ಹಣ ಖರ್ಚು ಮಾಡುವುದು ಒಳ್ಳೆಯ ಬೆಳವಣಿಗೆ ಖಂಡಿತ ಅಲ್ಲ ಎಂದು ಬೇಸರ ವ್ಯಕ್ತಪಡಿಸಿದರು.

ಶಾಸಕರಾದ ಎಸ್.ಆರ್. ವಿಶ್ವನಾಥ್, ಪಿಳ್ಳಮುನಿಶಾಮಪ್ಪ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಮಾತನಾಡಿದರು.

ಪ್ರಜಾವಾಣಿ ಭಾನುವಾರ 8ನೇ ಡಿಸೆಂಬರ್ 2013



ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಆದಿಚುಂಚನಗಿರಿ ಮಹಾಸಂಸ್ಥಾನಮಠದ ಪೀಠಾಧ್ಯಕ್ಷ ನಿರ್ಮಲಾನಂದಸ್ವಾಮೀಜಿ, ವಿದ್ಯಾಪೋಷಕರ ಸಂಘವನ್ನು ಉದ್ಘಾಟಿಸಿ ಮಾತನಾಡಿದರು. ಶಾಸಕರಾದ ಪಿಳ್ಳಮುನಿಶಾಮಪ್ಪ, ಎಸ್.ಆರ್.ವಿಶ್ವನಾಥ್, ಸಂಘದ ಅಧ್ಯಕ್ಷ ಎನ್. ಸೊಣ್ಣಪ್ಪ ಇದ್ದಾರೆ

## 'ಆರ್ಥಿಕವಾಗಿ ಹಿಂದುಳಿದವರಿಗೆ ನೆರವಾಗಿ'

ಯಲಹಂಕ: ಆರ್ಥಿಕವಾಗಿ ಹಿಂದುಳಿದ ಮಕ್ಕಳಿಗೆ ಶೈಕ್ಷಣಿಕ ನೆರವು ನೀಡುವುದು ಸಮಾಜದ ಆದ್ಯ ಕರ್ತವ್ಯವಾಗಬೇಕು ಎಂದು ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಪೀಠಾಧ್ಯಕ್ಷ ನಿರ್ಮಲಾನಂದ ಸ್ವಾಮೀಜಿ ಹೇಳಿದರು.

ಚಿರಂಜೀವಿ ಸಾಂಸ್ಕೃತಿಕ ಮತ್ತು ಕಲಾ ಸಂಘದ ಆಶ್ರಯದಲ್ಲಿ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ ವಿದ್ಯಾಪೋಷಕರ ಸಂಘದ ಉದ್ಘಾಟನೆ ಹಾಗೂ ನಿವೃತ್ತ ಉಪನ್ಯಾಸಕ ಎನ್.ಮುನಿಕೆಂಪಣ್ಣನವರ 'ಸಾರ್ಥಕ ಬದುಕಿಗೆ ಸಾವಿರಾರು ಸೂಕ್ತಿಗಳು' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದರು. ಪ್ರಸ್ತುತ ದೇಶದಲ್ಲಿ ಸಾವಿರಾರು ಮಕ್ಕಳು ವಿದ್ಯೆಯಿಂದ ವಂಚಿತರಾಗಿದ್ದು, ಅಂತಹ ಮಕ್ಕಳ ವಿದ್ಯಾಭ್ಯಾಸಕ್ಕೆ ಸರ್ಕಾರ ಸೇರಿದಂತೆ ಸಂಘ ಸಂಸ್ಥೆಗಳು ನೆರವಾಗಬೇಕು ಎಂದು ಸಲಹೆ ನೀಡಿದರು.

ಬೆಂಗಳೂರು [illegible] 3

ಶನಿವಾರ | ಡಿಸೆಂಬರ್ | 7 | 2013

# ಮಂಡೇಲಾ ನಿಧನಕ್ಕೆ ಸಂತಾಪ

**ಬೆಂಗಳೂರು:** ದಕ್ಷಿಣ ಆಫ್ರಿಕಾದ ಮಹಾನ್ ಸಾಮಾಜಿಕ ಸಂತ, ಗಾಂಧಿ ಅನುಯಾಯಿ ನೆಲ್ಸನ್ ಮಂಡೇಲಾ ಅವರ ನಿಧನಕ್ಕೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನ ಸಂತಾಪ ವ್ಯಕ್ತಪಡಿಸಿದೆ. ಮಂಡೇಲಾ ಅವರ ನಿಧನದಿಂದಾಗಿ ಗಾಂಧಿ ಅನುಯಾಯಿಗಳಿಗೆ ದಿಗ್ಭ್ರಮೆ ಉಂಟುಮಾಡಿದೆ ಎಂದು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೂ. ಶ್ರೀನಿವಾಸಯ್ಯ ತಿಳಿಸಿದ್ದಾರೆ. ಮಂಡೇಲಾ ಮಹಾನ್ ನಾಯಕ ಹಾಗೂ ಗಾಂಧಿ ಅವರ ತತ್ವಗಳಿಗೆ ಕಟಿಬದ್ಧರಾಗಿ ಕಾರ್ಯನಿರ್ವಹಿಸಿದವರು ಎಂದು ಬಣ್ಣಿಸಿದ್ದಾರೆ.

ಸಂಯುಕ್ತ ಕರ್ನಾಟಕ 04-12-2013, ಬುಧವಾರ

# 'ಸಂವಿಧಾನ ರಚನೆಯಲ್ಲಿ ವಕೀಲರ ಕೊಡುಗೆ'

ಬೆಂಗಳೂರು, ಡಿ. 3: ದೇಶದ ಸ್ವಾತಂತ್ರ್ಯ ಚಳವಳಿ ಸೇರಿದಂತೆ ಸಂವಿಧಾನ ರೂಪಿಸುವಲ್ಲಿ ವಕೀಲರ ಕೊಡುಗೆ ಮಹತ್ವವಾಗಿತ್ತು ಎಂದು ಹಿರಿಯ ವಕೀಲ ಎಸ್.ಪಿ. ಶಂಕರ್ ಅಭಿಪ್ರಾಯಪಟ್ಟರು.

ಬಸವ ಸಮಿತಿಯ ಅರಿವಿನ ಮನೆ ಸಭಾಂಗಣದಲ್ಲಿ ಎಚ್. ಎಸ್. ರೇಣುಕಪ್ರಸಾದ್ ಫೌಂಡೇಷನ್ ಹಾಗೂ ಲಾ–ಸೋಷಿಯಲ್ ಮತ್ತು ಕಲ್ಚರಲ್ ಟ್ರಸ್ಟ್ ಆಯೋಜಿಸಿದ್ದ 'ವಕೀಲರ ದಿನ' ಕಾರ್ಯಕ್ರಮ ಉದ್ಘಾಟಿಸಿದ ಅವರು, ಭಾರತ ಕ್ವಿಟ್ ಇಂಡಿಯಾ ಚಳವಳಿ ಸೇರಿದಂತೆ ಸ್ವಯಂಪ್ರೇರಿತವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗುವ ಮೂಲಕ ರಾಷ್ಟ್ರ ಪ್ರೇಮ ಮರೆದವರು ವಕೀಲರು. ಆದರೆ, ಇಂದಿನ ಸಮಾಜದಲ್ಲಿ ವಕೀಲರಿಗೆ ಘನತೆ, ಗೌರವ ಕಡಿಮೆಯಾಗುತ್ತಿದೆ. ಹೀಗಾಗಿ ವಕೀಲರು ಹಿಂದೆ ಇದ್ದ ಗೌರವವನ್ನು ಪುನರ್ ಸ್ಥಾಪಿಸಿಕೊಳ್ಳಬೇಕಾದ ಅವಶ್ಯಕತೆ ಇದೆ ಎಂದು ಹೇಳಿದರು.

ವಕೀಲರ ದಿನವನ್ನು ದೇಶದ ಮೊದಲ ರಾಷ್ಟ್ರಪತಿ ಡಾ. ಬಾಬು ರಾಜೇಂದ್ರ ಪ್ರಸಾದ್ ಅವರ ಜನ್ಮ ದಿನದ ಅಂಗವಾಗಿ ಆಚರಿಸಲಾಗುತ್ತಿದೆ. ಅವರು ಸ್ವಾತಂತ್ರ್ಯ ಹೋರಾಟದ ಜತೆಗೆ ಜನ ಸಾಮಾನ್ಯರ ನ್ಯಾಯಕ್ಕಾಗಿ ಹೋರಾಡಿದ ಧೀಮಂತ ನಾಯಕ. ಇಂತಹ ನಾಯಕರು ಹಾಕಿಕೊಟ್ಟ ಮಾರ್ಗದಲ್ಲಿ ಇಂದಿನ ಯುವ ವಕೀಲರು ಬೆಳಎಂದು ತಿಳಿಸಿದರು.

ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿ ಹಣ ಮಾಡುವ ವಕೀಲರಾಗಿರಲಿಲ್ಲ. ಅವರು ಸತ್ಯ, ಅಹಿಂಸೆ ಶೋಧನೆಗಾಗಿ ಜೀವನ ಪರ್ಯಂತಹೋರಾಟಮಾಡಿದರು. ಇದರಿಂದ ಎಲ್ಲರನ್ನು ಒಟ್ಟುಗೂಡಿಸಿ ದೇಶದ ದೊಡ್ಡ ಶಕ್ತಿಯಾಗಿದ್ದರು. ಹೀಗಾಗಿ ಯಾವುದೇ ಮನುಷ್ಯ ಸತ್ಯಕ್ಕಾಗಿ ಹೋರಾಟ ಮಾಡುವಾಗ ಅವರಲ್ಲಿ ಶಕ್ತಿ ಇರುತ್ತದೆ. ಹಾಗೆಯೇ ವಕೀಲರು ನ್ಯಾಯಕ್ಕಾಗಿ ವಾದ ಮಾಡುವಾಗ ಗಟ್ಟಿ ಧ್ವನಿಯಲ್ಲಿ ವಾದ ಮಂಡಿಸುತ್ತಾರೆ ಎಂದರು.



'ವಕೀಲರ ದಿನ' ಅಂಗವಾಗಿ ನಗರದ ಬಸವ ಸಮಿತಿಯ ಅರಿವಿನ ಮನೆ ಸಭಾಂಗಣದಲ್ಲಿ ಆಯೋಜಿಸಲಾಗಿದ್ದ ಕಾರ್ಯಕ್ರಮದಲ್ಲಿ ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ವೊಡೇ ಪಿ. ಕೃಷ್ಣ, ಹಿರಿಯ ವಕೀಲರಾದ ಪ್ರಮೀಳಾ ನೇಸರ್ಗಿ, ಮಾಜಿ ಸಚಿವೆ ಲೀಲಾದೇವಿ ಆರ್ ಪ್ರಸಾದ್, ಪಡುಬಿದ್ರಿ ರಾಘವೇಂದ್ರ ರಾವ್, ವಕೀಲ ಸಂಘದ ಅಧ್ಯಕ್ಷ ಕೆ.ಎನ್. ಸುಬ್ಬಾರೆಡ್ಡಿ ಉಪಸ್ಥಿತರಿದ್ದರು.



ಬುಧವಾರ, 04-12-2013

# ಗಾಂಧಿ ಪ್ರತಿಷ್ಠಾನಕ್ಕೆ ಆಯ್ಕೆ

ಬೆಂಗಳೂರು, ಡಿ.4- ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ಆಯ್ಕೆಯಾಗಿದ್ದಾರೆ.

ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಎಚ್.ಎಂ.ಶಿವಣ್ಣ, ಕಾರ್ಯದರ್ಶಿಯಾಗಿ ಕರ್ನಾಟಕ ಸಂಸ್ಕೃತಿ ವಿವಿಯ ಕುಲಪತಿ ಡಾ.ಮಲ್ಲೇಪುರಂ ಜಿ.ವೆಂಕಟೇಶ್, ಕೋಶಾಧ್ಯಕ್ಷೆ ಬಿ.ನಾರಾಯಣಮ್ಮ, ಕಾರ್ಯಕಾರಿಣಿ ಸದಸ್ಯರಾಗಿ ಜಿ.ಬಿ.ಶಿವರಾಜು, ಕೆ.ಜಿ.ವೆಂಕಟೇಶ್, ಪ್ರೊ.ಪ್ರತಾಪ್ ಲಿಂಗಯ್ಯ ಪದಾಧಿಕಾರಿಗಳಾಗಿ ಆಯ್ಕೆಯಾಗಿದ್ದಾರೆ.

ವಿಜಯವಾಣಿ
BANGALORE

ಬುಧವಾರ
4 ಡಿಸೆಂಬರ್ 2013



# ಕಳೆಗುಂದುತ್ತಿರುವ ವಕೀಲರ ಸ್ಥಾನಮಾನ: ಕಳವಳ

ಬೆಂಗಳೂರು: ಕೆಲ ಘಟನೆಗಳಿಂದಾಗಿ ಸಮಾಜದಲ್ಲಿ ವಕೀಲರ ಸ್ಥಾನಮಾನ ಕುಸಿಯುತ್ತಿದೆ ಎಂದು ಹಿರಿಯ ವಕೀಲ ಎಸ್.ಪಿ.ಶಂಕರ್ ಆತಂಕ ವ್ಯಕ್ತಪಡಿಸಿದ್ದಾರೆ.

ಎಚ್.ಎಸ್. ರೇಣುಕಾಪ್ರಸಾದ್ ಲಾ-ಸೋಷಿಯಲ್ ಮತ್ತು ಕಲ್ಚರಲ್ ಟ್ರಸ್ಟ್ ಹಾಗೂ ಗಾಂಧಿ ಶಾಂತಿ ಫೌಂಡೇಷನ್ ಸಹಯೋಗದಲ್ಲಿ ಬಸವ ಸಮಿತಿ ಅರಿವಿನ ಮನೆಯಲ್ಲಿ ಏರ್ಪಡಿಸಿದ್ದ ವಕೀಲರ ದಿನ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದವರಲ್ಲಿ ಬಹುತೇಕರು ವಕೀಲರು. ಸಂವಿಧಾನದ ಕೊಡುಗೆಯಲ್ಲಿ ವಕೀಲರ ಪಾತ್ರ ಮಹತ್ವದ್ದಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ನಡೆದ ಘಟನೆಗಳಿಂದ ವಕೀಲರ ಸ್ಥಾನಮಾನ ಕುಂದುತ್ತಿದೆ ಎಂದು ಅವರು ವಿಷಾದಿಸಿದರು.

ಹಿರಿಯ ವಕೀಲೆ ಪ್ರಮೀಳಾ ನೇಸರ್ಗಿ ಮಾತನಾಡಿ, ಪ್ರತಿ ಘಟನೆಯಲ್ಲೂ ಸತ್ಯಾಸತ್ಯತೆ ಪರಾಮರ್ಶಿಸುವುದು ವಕೀಲರ ಕೆಲಸ. ತಪ್ಪನ್ನು ಕಂಡು ಹಿಡಿಯುವುದು ಅವರ ನೈಪುಣ್ಯತೆ ಎಂದರು.



ನಗರದಲ್ಲಿ ಮಂಗಳವಾರ ನಡೆದ ವಕೀಲರ ದಿನ ಕಾರ್ಯಕ್ರಮದಲ್ಲಿ ಪ್ರಮೀಳಾ ನೇಸರ್ಗಿ, ಸುಬ್ಬಾರೆಡ್ಡಿ, ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್ ಮತ್ತಿತರರು ಇದ್ದರು.

ಸಂಘದ ಅಧ್ಯಕ್ಷ ಸುಬ್ಬಾರೆಡ್ಡಿ ಮಾತನಾಡಿ, ನಮ್ಮಲ್ಲಿ ಅನೇಕ ಹಿರಿಯ ವಕೀಲರಿದ್ದಾರೆ. ಇವರಲ್ಲಿ ಅನೇಕರು ದೇಶಕ್ಕಾಗಿ ಎಲ್ಲವನ್ನೂ ತ್ಯಾಗ ಮಾಡಿದ್ದಾರೆ. ಅಂತಹವರನ್ನು ನೆನೆಸಿಕೊಳ್ಳುವುದು ನಮ್ಮ ಕರ್ತವ್ಯ. ಆ ರೀತಿಯ ಕಾರ್ಯ ಹೆಚ್ಚಬೇಕು ಎಂದರು.

ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್, ಲಾ-ಸೋಷಿಯಲ್ ಮತ್ತು ಕಲ್ಚರಲ್ ಟ್ರಸ್ಟ್‌ನ ಅಧ್ಯಕ್ಷ ಎಚ್.ಎಸ್. ರೇಣುಕಾಪ್ರಸಾದ್, ಗಾಂಧೀ ಶಾಂತಿ ಫೌಂಡೇಷನ್ ಅಧ್ಯಕ್ಷ ವೂಡೆ ಪಿ.ಕೃಷ್ಣ, ಹಿರಿಯ ವಕೀಲ ಪಡುಬಿದ್ರಿ ರಾಘವೇಂದ್ರ ರಾವ್ ಇದ್ದರು.

ಪ್ರಜಾವಾಣಿ
ಚಿತ್ರದುರ್ಗ ಜಿಲ್ಲೆ

ಸೋಮವಾರ
2ನೇ ಡಿಸೆಂಬರ್, 2013

# ಧರ್ಮಪುರ: ಫೆಬ್ರುವರಿಯಲ್ಲಿ ಆಂಧ್ರ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನ

ಪ್ರಜಾವಾಣಿ ವಾರ್ತೆ

ಧರ್ಮಪುರ: ಆಂಧ್ರಪ್ರದೇಶದ ಗಡಿನಾಡ ಕನ್ನಡ ಸಾಹಿತ್ಯ ಪರಿಷತ್‌ನ ಕಾರ್ಯಕಾರಿ ಮಂಡಳಿ ಸಮೀಪದ ಪಿ.ಅಗ್ರಹಾರಂನ ಶ್ರೀಮತಿ ಜಯಮ್ಮ ಸಮುದಾಯ ಭವನದಲ್ಲಿ ಭಾನುವಾರ ಪೂರ್ವಭಾವಿ ಸಭೆ ಕರೆಯಲಾಗಿತ್ತು.

ಆಂಧ್ರ ಗಡಿನಾಡ 4ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನಡೆಸುವ, ಸ್ಥಳ ಹಾಗೂ ಸಮ್ಮೇಳನಾಧ್ಯಕ್ಷರ ಆಯ್ಕೆ ಬಗ್ಗೆ ಪೂರ್ವಭಾವಿ ಸಭೆಯಲ್ಲಿ ಚರ್ಚಿಸಲಾಯಿತು.

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ರಾಯದುರ್ಗದಲ್ಲಿ ಫೆಬ್ರುವರಿ ಕೊನೆಯ ವಾರದಲ್ಲಿ ಆಯೋಜಿಸುವ ಬಗ್ಗೆ ತೀರ್ಮಾನಿಸಲಾಯಿತು.

ಹೆಸರಾಂತ ಶಿಕ್ಷಣ ತಜ್ಞ, ಲೇಖಕ, ಗಾಂಧೀವಾದಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ, ಕೆಂಪೇಗೌಡ ಪ್ರಶಸ್ತಿ ಪುರಸ್ಕೃತ, ರಾಷ್ಟ್ರಪತಿ ಚಿನ್ನದ ಪದಕ ಪುರಸ್ಕೃತರಾದ ಹಾಗೂ ಆಂಧ್ರ ಮೂಲದವರೇ ಆದ ಡಾ.ವೂಡೇ ಪಿ.ಕೃಷ್ಣ ಅವರನ್ನು ಸಮ್ಮೇಳನ ಅಧ್ಯಕ್ಷರನ್ನಾಗಿ ಸಭೆ ಸರ್ವಾನುಮತದಿಂದ ಒಪ್ಪಿ ಆಯ್ಕೆ ಮಾಡಿತು.

ಪೂರ್ವಭಾವಿ ಸಭೆಯ ಅಧ್ಯಕ್ಷತೆಯನ್ನು ಆಂಧ್ರ ಗಡಿನಾಡ ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷ ಪ್ರೊ.ಪಿ.ಅಗ್ರಹಾರಂ ಎಚ್.ಬಿ. ಶಿವಕುಮಾರ್ ವಹಿಸಿದ್ದರು.

ವೇದಿಕೆಯಲ್ಲಿ ಕಾರ್ಯದರ್ಶಿ ಬಿ.ಸಿ.ದೇವರಾಜು, ಎನ್. ಜಯದೇವಮೂರ್ತಿ, ಕೋಶಾಧ್ಯಕ್ಷ ಜಯಶಂಕರ್, ನಿಕಟಪೂರ್ವ ಅಧ್ಯಕ್ಷ ಎಚ್. ರಾಮಚಂದ್ರಪ್ಪ, ಎಲ್.ರಾಮಲಿಂಗಪ್ಪ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ
ಬೆಂಗಳೂರು | ಸೋಮವಾರ 2 | ಡಿಸೆಂಬರ್ 2013

# ಗಾಂಧಿ ಶಾಂತಿ ಪ್ರತಿಷ್ಠಾನಕ್ಕೆ ಆಯ್ಕೆ

ಗಾಂಧಿ ಶಾಂತಿ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯಲ್ಲಿ ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಅಧ್ಯಕ್ಷರಾಗಿ, ಸ್ವಾತಂತ್ರ್ಯ ಹೋರಾಟಗಾರ ಎಚ್.ಎಂ. ಶಿವಣ್ಣ ಉಪಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಕರ್ನಾಟಕ ಸಂಸ್ಕೃತಿ ವಿಶ್ವವಿದ್ಯಾಲಯ ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ್ ಕಾರ್ಯದರ್ಶಿಯಾಗಿ, ನಿವೃತ್ತ ಪ್ರಾಂಶುಪಾಲ ಪ್ರೊ. ಬಿ. ನಾರಾಯಣಮ್ಮ ಕೋಶಾಧ್ಯಕ್ಷರಾಗಿದ್ದಾರೆ. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಜಿ.ಬಿ. ಶಿವರಾಜು, ಸಾರ್ವಜನಿಕ ಗ್ರಂಥಾಲಯ ಇಲಾಖೆ ನಿವೃತ್ತ ನಿರ್ದೇಶಕ ಕೆ.ಜಿ. ವೆಂಕಟೇಶ್, ರಾಜ್ಯ ಎನ್‌ಎಸ್‌ಎಸ್ ಪ್ರಶಸ್ತಿ ಪುರಸ್ಕೃತ ಪ್ರೊ. ಪ್ರತಾಪ್ ಲಿಂಗಯ್ಯ ಕಾರ್ಯಕಾರಿಣಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ.

ಈ ಸಂಜೆ

ಭಾನುವಾರ, 01 ಡಿಸೆಂಬರ್ 2013

# ಕನ್ನಡಿಗರು ಜಾಗೃತರಾಗಿ



ಬೆಂಗಳೂರು, ಡಿ.1- ಇಂದು ಕನ್ನಡಿಗರು ತುಂಬಾ ಜಾಗೃತರಾಗಬೇಕಿದೆ. ಅದರಲ್ಲೂ ನಾಡು-ನುಡಿಯ ರಕ್ಷಣೆಯಲ್ಲಿ ಯುವ ಶಕ್ತಿಯ ಪಾತ್ರ ಮುಖ್ಯವಾದುದು ಎಂದು ಶೇಷಾದ್ರಿಪುರಂ ಕಾಲೇಜಿನ ಡಾ. ವೂಡೇ ಪಿ.ಕೃಷ್ಣ ಅವರು ಹೇಳಿದರು.

ಗಾಂಧಿನಗರ ವಿಧಾನಸಭಾ ಕ್ಷೇತ್ರ ಕನ್ನಡ ಸಾಹಿತ್ಯ ಪರಿಷತ್ತು ಶೇಷಾದ್ರಿಪುರಂನ ಮುಖ್ಯ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಅವರು ಮಾತನಾಡಿದರು.

ಕಾರ್ಯಕ್ರಮದ ನಿಮಿತ್ತ ಹಮ್ಮಿಕೊಂಡಿದ್ದ ಗೀತಾ ಗಾಯನ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಿಬಿಎಂಪಿ ಸದಸ್ಯ ಸತ್ಯನಾರಾಯಣ ಬಹುಮಾನ ವಿತರಿಸಿದರು.

ಗಾಯಕ ವೈ.ಕೆ. ಮುದ್ದುಕೃಷ್ಣ, ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ತಿಮ್ಮೇಶ್, ಕಾರ್ಯದರ್ಶಿ ಪಿನಾಕ ಪಾಣಿ, ಗಾಂಧಿನಗರ ಕಸಾಪ ಅಧ್ಯಕ್ಷೆ ಮಂಜುಳಾ ಶಿವಾನಂದ ಪಾಲ್ಗೊಂಡಿದ್ದರು. ಇದೇ ವೇಳೆ ಲೇಖಕಿ ಕುಲಶೇಖರಿ ಅವರನ್ನು ಸನ್ಮಾನಿಸಲಾಯಿತು.

ಬೆಂಗಳೂರು ಉದಯವಾಣಿ
ಶನಿವಾರ | ನವೆಂಬರ್ | 30 | 2013

# ಗಾಂಧಿ ಪ್ರತಿಷ್ಠಾನದ ಪದಾಧಿಕಾರಿಗಳು

ಬೆಂಗಳೂರು: ಗಾಂಧಿ ಶಾಂತಿ ಪ್ರತಿಷ್ಠಾನದ ನೂತನ ಸಾಲಿನ ಅಧ್ಯಕ್ಷರಾಗಿ ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ಹಾಗೂ ಕಾರ್ಯದರ್ಶಿಯಾಗಿ ಕರ್ನಾಟಕ ಸಂಸ್ಕೃತ ವಿವಿ ಕುಲಪತಿ ಡಾ.ಮಲ್ಲೇಪುರಂ ಜಿ.ವೆಂಕಟೇಶ್ ಅವರುಗಳು ಆಯ್ಕೆಯಾಗಿದ್ದಾರೆ. ಗುರುವಾರ ನಡೆದ ಪ್ರತಿಷ್ಠಾನದ ಸರ್ವ ಸದಸ್ಯರ ಮಹಾಸಭೆಯಲ್ಲಿ 2013-16ರ ಸಾಲಿನ ಪದಾಧಿಕಾರಿಗಳ ಆಯ್ಕೆ ಪ್ರಕ್ರಿಯೆ ನಡೆಯಿತು. ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಂ. ಶಿವಣ್ಣ, ಕೋಶಾಧ್ಯಕ್ಷರಾಗಿ ಪ್ರೊ.ಬಿ. ನಾರಾಯಣಮ್ಮ ಹಾಗೂ ಕಾರ್ಯಕಾರಿಣಿ ಸದಸ್ಯರಾಗಿ ಪ್ರೊ.ಜೆ.ಬಿ. ಶಿವರಾಜು, ಕೆ.ಜಿ. ವೆಂಕಟೇಶ್, ಪ್ರೊ.ಪ್ರತಾಪ್ ಲಿಂಗಯ್ಯ ಅವರು ಆಯ್ಕೆಯಾಗಿದ್ದಾರೆ.

ಈ ಸಂಜೆ

ಬುಧವಾರ, 27 ನವೆಂಬರ್ 2013



ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ರಾಜ್ಯೋತ್ಸವದಲ್ಲಿ ಹಿರಿಯ ಸಾಹಿತಿ ಹೀ.ಚಿ.ಶಾಂತವೀರಯ್ಯ ಅವರನ್ನು ಸನ್ಮಾನಿಸಲಾಯಿತು. ಡಾ.ವೂಡೆ.ಪಿ.ಕೃಷ್ಣ, ಕೃಷ್ಣಸ್ವಾಮಿ, ಜಿ.ಪರಮೇಶ್ವರಯ್ಯ, ಪ್ರಾಂಶುಪಾಲರಾದ ಆರ್.ಮಹಾಲಕ್ಷ್ಮಿ ಉಪಸ್ಥಿತರಿದ್ದರು.

ಸಂಜೆವಾಣಿ

ಭಾನುವಾರ
10 ನವೆಂಬರ್ 2013




ನಗರದ ಶೇಷಾದ್ರಿಪುರಂ ಕಾನೂನು ಕಾಲೇಜು ಆಯೋಜಿಸಿದ್ದ ಸ್ವಯಂ ರಕ್ತದಾನ ಶಿಬಿರದಲ್ಲಿ ಮೇಯರ್ ಎಸ್.ಬಿ. ಸತ್ಯನಾರಾಯಣ, ರಾಜ್ಯ ಸ್ವಯಂ ರಕ್ತದಾನಿಗಳ ಸಂಸ್ಥೆ ಅಧ್ಯಕ್ಷ ರಾಜು ಚಂದ್ರಶೇಖರ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ, ಕಾಲೇಜು ಮಂಡಳಿ ಅಧ್ಯಕ್ಷ ಕೆ. ಕೃಷ್ಣಸ್ವಾಮಿ ಇದ್ದಾರೆ.

ವಿಜಯವಾಣಿ
BANGALORE
ಭಾನುವಾರ ● 1 ಡಿಸೆಂಬರ್ 2013

# ಗಾಂಧಿ ಪ್ರತಿಷ್ಠಾನ ಅಧ್ಯಕ್ಷರಾಗಿ ವೂಡೆ ಪಿ. ಕೃಷ್ಣ ಆಯ್ಕೆ

**ಬೆಂಗಳೂರು:** ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ



ಡಾ.ವೂಡೇ ಪಿ.ಕೃಷ್ಣ 2013-16ರ ಅವಧಿಗೆ ಆಯ್ಕೆಯಾಗಿದ್ದಾರೆ. ಉಪಾಧ್ಯಕ್ಷರಾಗಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಂ. ಶಿವಣ್ಣ, ಕಾರ್ಯದರ್ಶಿಯಾಗಿ ಕರ್ನಾಟಕ ಸಂಸ್ಕೃತ ವಿವಿ ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ್, ಕೋಶಾಧ್ಯಕ್ಷರಾಗಿ ಪ್ರೊ. ಬಿ. ನಾರಾಯಣಮ್ಮ, ಕಾರ್ಯಕಾರಿಣಿ ಸದಸ್ಯರಾಗಿ ಪ್ರೊ. ಜಿ.ಬಿ. ಶಿವರಾಜು, ಕೆ.ಜಿ. ವೆಂಕಟೇಶ್ ಹಾಗೂ ಪ್ರೊ.ಪ್ರತಾಪ್ ಲಿಂಗಯ್ಯ ಆಯ್ಕೆಯಾಗಿದ್ದಾರೆ.



ಶನಿವಾರ
30 ನವೆಂಬರ್ 2013

# ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷರಾಗಿ ವೂಡೆ ಪಿ. ಕೃಷ್ಣ

ಬೆಂಗಳೂರು, ನ. ೩೦- ಗಾಂಧಿ ಶಾಂತಿ ಪ್ರತಿಷ್ಠಾನದ ನೂತನ ಸಾಲಿನ ಪದಾಧಿಕಾರಿಗಳ ಆಯ್ಕೆ ನಡೆದಿದ್ದು, ಅಧ್ಯಕ್ಷರಾಗಿ ಶಿಕ್ಷಣ ತಜ್ಞ ಡಾ. ವೂಡೆ ಪಿ. ಕೃಷ್ಣ ಆಯ್ಕೆಯಾಗಿದ್ದಾರೆ. ಸ್ವಾತಂತ್ರ್ಯ ಹೋರಾಟಗಾರ ಎಚ್.ಎಂ.ಶಿವಣ್ಣ ಉಪಾಧ್ಯಕ್ಷರಾಗಿ ಡಾ.ಮಲ್ಲೇಪುರಂ ಜಿ.ವೆಂಕಟೇಶ್, ಕಾರ್ಯದರ್ಶಿ ಪ್ರೊ.ಬಿ.ನಾರಾಯಣಮ್ಮ ಕೋಶಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.

ಕಾರ್ಯಕಾರಿಣಿ ಸದಸ್ಯರಾಗಿ ಪ್ರೊ.ಜಿ.ಬಿ.ಶಿವರಾಜು, ಕೆ.ಜಿ.ವೆಂಕಟೇಶ್, ಪ್ರೊ.ಪ್ರತಾಪ್ ಲಿಂಗಯ್ಯ ಆಯ್ಕೆಯಾಗಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

ಬೆಂಗಳೂರು ಉದಯವಾಣಿ

ಭಾನುವಾರ | ನವೆಂಬರ್ | 10 | 2013

## ರಕ್ತದಾನ...

ಶೇಷಾದ್ರಿಪುರಂ ಕಾನೂನು ಕಾಲೇಜಿನ ವಿದ್ಯಾರ್ಥಿಗಳ ಶನಿವಾರ ಆಯೋಜಿಸಿದ್ದ ಸ್ವಯಂ ರಕ್ತದಾನ ಶಿಬಿರಕ್ಕೆ ಮೇಯರ್ ಕಟ್ಟೆ ಸತ್ಯನಾರಾಯಣ ಅವರು ಭೇಟಿ ಕೊಟ್ಟಿದ್ದರು. ಶೇಷಾದ್ರಿಪುರಂ ಶಿಕ್ಷಣ ಸಮಿತಿ ಪಂಡಿತರಾಧ್ಯ, ವುಡೇ ಪಿ. ಕೃಷ್ಣ ರಾಜು, ಚಂದ್ರಶೇಖರ್ ಮೊದಲಾದವರು ಇದ್ದರು.



ಕನ್ನಡಪ್ರಭ

ಬೆಂಗಳೂರು | ಭಾನುವಾರ 10 | ನವೆಂಬರ್ 2013




ಶೇಷಾದ್ರಿಪುರ ಕಾನೂನು ಕಾಲೇಜಿನಲ್ಲಿ ಶನಿವಾರ ಹಮ್ಮಿಕೊಂಡಿದ್ದ ಸ್ವಯಂ ರಕ್ತದಾನ ಶಿಬಿರ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಮೇಯರ್ ಕಟ್ಟೆ ಸತ್ಯನಾರಾಯಣ ಅವರು ರಕ್ತದಾನಿಯೊಂದಿಗೆ ಕುಶಲೋಪರಿ ನಡೆಸುತ್ತಿರುವುದು. ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ ಇದ್ದಾರೆ.

ಶನಿವಾರ, 09 ನವೆಂಬರ್ 2013
ಈ ಸಂಜೆ




ಶೇಷಾದ್ರಿಪುರಂ ಕಾನೂನು ಕಾಲೇಜು ಆಯೋಜಿಸಿದ್ದ ಸ್ವಯಂ ರಕ್ತದಾನ ಶಿಬಿರವನ್ನು ಬಿಬಿಎಂಪಿ ಪಾಲಿಕೆ ಮೇಯರ್ ಕಟ್ಟೆ ಸತ್ಯನಾರಾಯಣ ಉದ್ಘಾಟಿಸಿದರು. ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಸ್ಥೆ ಅಧ್ಯಕ್ಷ ರಾಜು ಚಂದ್ರಶೇಖರ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಕಾಲೇಜು ಮಂಡಳಿ ಅಧ್ಯಕ್ಷ ಕೆ.ಕೃಷ್ಣಸ್ವಾಮಿ ಮತ್ತಿತರರಿದ್ದರು.

# ಕರ್ನಾಟಕ

ಮಂಗಳವಾರ,3 ಡಿಸೆಂಬರ್ 2013

## ಡಾ.ವೂಡೇ ಸಮ್ಮೇಳನಾಧ್ಯಕ್ಷ

**ಹಿರಿಯೂರು:** ರಾಯದುರ್ಗದಲ್ಲಿ ಫೆಬ್ರವರಿ ಕೊನೆ ವಾರದಲ್ಲಿ ನಡೆಯಲಿರುವ 4ನೇ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ಆಯ್ಕೆಯಾಗಿದ್ದಾರೆ ಎಂದು ಪರಿಷತ್ ಅಧ್ಯಕ್ಷ ಪ್ರೊ ವಿ. ಅಗ್ರಹಾರಂ ಶಿವಕುಮಾರ್ ತಿಳಿಸಿದ್ದಾರೆ.

ಆಂಧ್ರ ಗಡಿನಾಡ ಕನ್ನಡ ಸಾಹಿತ್ಯ ಪರಿಷತ್ ಹಾಗೂ ರಾಜ್ಯ ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳ ಹಮ್ಮಿಕೊಳ್ಳಲಾಗಿದೆ. ರೇಷ್ಮೆ ಸೀರೆಗೆ ಹೆಸರಾಗಿರುವ ರಾಯದುರ್ಗದಲ್ಲಿ ಸಮ್ಮೇಳನ ನಡೆಸಲು ನಿರ್ಧರಿಸಲಾಗಿದೆ. ಆಂಧ್ರ ಮೂಲದವರಾದ ಡಾ.ವೂಡೇ ಪಿ.ಕೃಷ್ಣ ಅವರು ಲೇಖಕರು, ಗಾಂಧಿವಾದಿ, ರಾಷ್ಟ್ರಪತಿ ಚಿನ್ನದ ಪದಕ ಹಾಗೂ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು.

ಪರಿಷತ್ ಕಾರ್ಯದರ್ಶಿ ಬಿ.ಸಿ. ದೇವರಾಜ್, ಎನ್. ಜಯದೇವಮೂರ್ತಿ, ಕೋಶಾಧ್ಯಕ್ಷ ಜಯಶಂಕರ್, ನಿಕಟಪೂರ್ವ ಅಧ್ಯಕ್ಷ ಎಚ್. ರಾಮಚಂದ್ರಪ್ಪ ಉಪಸ್ಥಿತರಿದ್ದರು.

ಮಂಗಳವಾರ,5 ನವೆಂಬರ್ 2013, ಚಿತ್ರದುರ್ಗ



ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ ಮತ್ತು ಆಂಧ್ರದ ಗಡಿನಾಡ ಕನ್ನಡ ಸಾಹಿತ್ಯ ಪರಿಷತ್ ಸಂಘದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕು ಡಿ.ಹಿರೇಹಾಳ್ ಗ್ರಾಮದಲ್ಲಿ ಏರ್ಪಡಿಸಿದ್ದ ಕೆ.ಎಚ್.ಎಸ್. ಕವಿ, ಕಾವ್ಯ, ಗಾಯನ ಚಿಂತನ ಮಾಲೆ. ಕಾರ್ಯಕ್ರಮವನ್ನು ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷ ಕೆ.ಮಹೇಶ್ವರಪ್ಪ ಉದ್ಘಾಟಿಸಿದರು.

# ವಿಜಯವಾಣಿ ಚಿತ್ರದುರ್ಗ ಲೋಕಲ್

CHITRADURGA

ಮಂಗಳವಾರ 3 ಡಿಸೆಂಬರ್ 2013 | 3

## ರಾಯದುರ್ಗದಲ್ಲಿ 4ನೇ ಗಡಿನಾಡ ಸಾಹಿತ್ಯ ಸಮ್ಮೇಳನ

ಧರ್ಮಪುರ: ಫೆಬ್ರವರಿ ಕೊನೆ ವಾರದಲ್ಲಿ ಅನಂತಪುರ ಜಿಲ್ಲೆಯ ರಾಯದುರ್ಗದಲ್ಲಿ 4ನೇ ಗಡಿನಾಡ ಸಾಹಿತ್ಯ ಸಮ್ಮೇಳನ ಆಯೋಜಿಸಿರುವುದಾಗಿ ಗಡಿನಾಡ ಘಟಕದ ಅಧ್ಯಕ್ಷ ಪ್ರೊ.ವಿ. ಅಗ್ರಹಾರಂ ಎಚ್.ಬಿ. ಶಿವಕುಮಾರ್ ತಿಳಿಸಿದ್ದಾರೆ.

ವಲಸೆ ಗ್ರಾಮದಲ್ಲಿ ಭಾನುವಾರ ನಡೆದ ಕಾರ್ಯಕಾರಿ ಸಮಿತಿಯಲ್ಲಿ ಮಾತನಾಡಿದರು. ಸರ್ಕಾರ ಗಡಿನಾಡ ಕನ್ನಡಿಗರಿಗೆ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಬೇಕು. ಅಲ್ಲಿನ ಪ್ರದೇಶದ ಕನ್ನಡ ಶಾಲೆಗಳು ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದು, ಮುಚ್ಚುವ ಹಂತಕ್ಕೆ ಬಂದಿವೆ. ಗಡಿನಾಡ ಕನ್ನಡಿಗರಿಗೆ ಉದ್ಯೋಗದಲ್ಲಿ ವಿಶೇಷ ಮೀಸಲಾತಿ ಕಲ್ಪಿಸಬೇಕು ಎಂದು ಒತ್ತಾಯಿಸಿದರು. ಗಾಂಧಿವಾದಿ ಡಾ. ವೂಡೇ ಪಿ. ಕೃಷ್ಣ, ದೇವರಾಜ್, ಜಯದೇವ ಮೂರ್ತಿ, ಜಯಶಂಕರ್, ರಾಮ ಲಿಂಗೇಶ್ವರಪ್ಪ ಉಪಸ್ಥಿತರಿದ್ದರು.

ವಿಜಯವಾಣಿ ಶುಕ್ರವಾರ 25 ಅಕ್ಟೋಬರ್ 2013

**ಗಣಿ ಉದ್ಯಮ ವಿಚಾರಗೋಷ್ಠಿ:** ಭಾರತೀಯ ಇಂಜಿನಿಯರ್‌ಗಳ ಸಂಸ್ಥೆಯ ಕರ್ನಾಟಕ ಕೇಂದ್ರವು ಅ. 25, 26ರಂದು 'ಗಣಿ ಉದ್ಯಮ-ದೃಷ್ಟಿ 2025' ಕುರಿತಾಗಿ 2 ದಿನಗಳ ರಾಷ್ಟ್ರೀಯ ವಿಚಾರಗೋಷ್ಠಿ ಆಯೋಜಿಸಿದೆ. ಗಣಿ ಉದ್ಯಮಕ್ಕೆ ಸಂಬಂಧಿಸಿದ ಕಾನೂನು, ಪರಿಸರ ಸಂರಕ್ಷಣೆ, ಗಣಿಗಾರಿಕೆ ಸುರಕ್ಷೆ ಕುರಿತು ಪ್ರಬಂಧ ಮಂಡನೆ. ಭಾಗವಹಿಸುವವರು: ಡಾ. ವೊಡೇ ಪಿ. ಕೃಷ್ಣ, ಗಣಿ ಇಂಜಿನಿಯರಿಂಗ್ ತಜ್ಞ ಪಿಚ್ಚಮುತ್ತು, ಗಣಿ ಶಿಕ್ಷಣ ತಜ್ಞ ಡಾ. ಟಿ. ತಿಮ್ಮಯ್ಯ. ಸ್ಥಳ: ಸಂಸ್ಥೆಯ ಕರ್ನಾಟಕ ಕೇಂದ್ರದ ಸಭಾಂಗಣ, ಡಾ. ಅಂಬೇಡ್ಕರ್ ವೀಧಿ. ಸಮಯ: ಬೆಳಗ್ಗೆ 10 ಗಂಟೆಯಿಂದ ಆರಂಭ.

ಕನ್ನಡಪ್ರಭ

ಬೆಂಗಳೂರು | ಶುಕ್ರವಾರ 25 | ಅಕ್ಟೋಬರ್ 2013

ದಿ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್: ಉಪನ್ಯಾಸ- ಡಾ.ಟಿ. ತಿಮ್ಮಯ್ಯ, ವಿಷಯ- ಗಣಿ ಉದ್ಯಮ ಕುರಿತು ರಾಷ್ಟ್ರೀಯ ವಿಚಾರಗೋಷ್ಠಿ, ಅಧ್ಯಕ್ಷತೆ- ಡಾ. ವೂಡೇ ಪಿ.ಕೃಷ್ಣ, ಕರ್ನಾಟಕ ರಾಜ್ಯ ಕೇಂದ್ರ, ನಂ.3, ಡಾ.ಬಿ.ಆರ್. ಅಂಬೇಡ್ಕರ್ ವೀದಿ, ಬೆಳಗ್ಗೆ 10.

2 DECCAN HERALD

Friday, October 25, 2013

**The Institution of Engineers (India):** "Whither Mining? - Vision 2025": T Thimmaiah, Wooday P Krishna participate, The Institution premises, Karnataka State Centre, Dr B R Ambedkar Veedhi, 10 am.

ಸಂಜೆವಾಣಿ
2 ಗುರುವಾರ 24 ಅಕ್ಟೋಬರ್ 2013

# ರಾಷ್ಟ್ರೀಯ ವಿಚಾರಗೋಷ್ಠಿ

ಬೆಂಗಳೂರು, ಅ. ೨೪- ಭಾರತೀಯ ಇಂಜಿನಿಯರುಗಳ ಸಂಸ್ಥೆ ಕರ್ನಾಟಕ ರಾಜ್ಯ ಕೇಂದ್ರ, ನಾಳೆಯಿಂದ ಎರಡು ದಿನಗಳ ಕಾಲ "ಗಣಿ ಉದ್ಯಮ ದೃಷ್ಟಿ-2025" ವಿಚಾರ ಕುರಿತು ರಾಷ್ಟ್ರೀಯ ವಿಚಾರಗೋಷ್ಠಿಯನ್ನು ಆಯೋಜಿಸಿದೆ.

ನಾಳೆ ಬೆಳಿಗ್ಗೆ 10 ಗಂಟೆಗೆ ಗೋಷ್ಠಿಯ ಉದ್ಘಾಟನಾ ಸಮಾರಂಭ ಏರ್ಪಡಿಸಲಾಗಿದ್ದು, ಈ ಸಮಾರಂಭದಲ್ಲಿ ಸಂಸ್ಥೆಯ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಗಣಿ ಇಂಜಿನಿಯರಿಂಗ್ ತಜ್ಞ ಪಿಚ್ಚಮುತ್ತು, ಗಣಿ ಶಿಕ್ಷಣ ತಜ್ಞ ಡಾ.ತಿಮ್ಮಯ್ಯ ಸೇರಿದಂತೆ ಮುಂತಾದವರು ಪಾಲ್ಗೊಳ್ಳಲಿದ್ದಾರೆ.

ಕನ್ನಡಪ್ರಭ ಪುಟ 3

# ಹಾಸನ

ಬೆಂಗಳೂರು | ಸೋಮವಾರ 21 | ಅಕ್ಟೋಬರ್ 2013




ಹಾಸನ ಜಿಲ್ಲಾ ಸ್ವಾತಂತ್ರ ಹೋರಾಟಗಾರರ ಭವನಕ್ಕೆ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಡಾ.ಡಬ್ಲು.ಪಿ.ಕೃಷ್ಣ, ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಪ್ರೊ. ಶಿವರಾಜ್, ಭ್ರಷ್ಟಾಚಾರ ಸಂಯಮ ಮಂಡಳಿ ಕಾರ್ಯದರ್ಶಿ ದಿನೇಶ್ ಭೇಟಿ ನೀಡಿದ್ದರು. ಸಾಹಿತಿ ಜ.ಹೊ. ನಾರಾಯಣಸ್ವಾಮಿ, ವಾರ್ತಾ ಇಲಾಖೆ ಜಂಟಿ ನಿರ್ದೇಶಕಿ ಮಮತ, ಸ್ವಾತಂತ್ರ ಹೋರಾಟಗಾರ ಎಚ್.ಎಂ.ಶಿವಣ್ಣ ಇದ್ದಾರೆ.




ಸೋಮವಾರ

21 ಅಕ್ಟೋಬರ್ 2013

ನಗರದ ಶೇಷಾದ್ರಿಪುರ ಕಾನೂನು ಕಾಲೇಜಿನಲ್ಲಿಂದು ನಡೆದ ಆಹಾರ ಭದ್ರತಾ ಕಾಯ್ದೆ ಕಾರ್ಯಾಗಾರಕ್ಕೆ ಚಾಲನೆ ನೀಡಿದ ರಾಜ್ಯದ ಆಹಾರ ಸಚಿವ ದಿನೇಶ್ ಗುಂಡೂರಾವ್‌ರವರನ್ನು ಕಾಲೇಜಿನ ಆಡಳಿತ ಮಂಡಳಿಯ ಮುಖ್ಯಸ್ಥರಾದ ವೂಡೆ ಪಿ. ಕೃಷ್ಣ, ಪಂಡಿತಾರಾಧ್ಯ ಇವರುಗಳು ಸನ್ಮಾನಿಸಿದರು.

ವಿಜಯವಾಣಿ

ಗುರುವಾರ ● 17 ಅಕ್ಟೋಬರ್ 2013



**ಶ್ರದ್ಧಾಂಜಲಿ.**

ನಗರದ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ನಾಡೋಜ ಪಾಟೀಲ್ ಪುಟ್ಟಪ್ಪ ಅವರ ಪತ್ನಿ ಇಂದುಮತಿ ಪಾಟೀಲ್ ಅವರಿಗೆ ಶ್ರದ್ಧಾಂಜಲಿ ಸಲ್ಲಿಸಲಾಯಿತು. ಹೊ.ಶ್ರೀನಿವಾಸಯ್ಯ, ನ್ಯಾ. ಎ.ಜೆ. ಸದಾಶಿವ, ಪಿ.ಜಿ.ಆರ್. ಸಿಂಧ್ಯಾ ಮತ್ತಿತರರು ಇದ್ದರು.

# 'ಪಾಪು' ಸರ್ಕಾರದ ಅತಿಥಿಯಾಗಲಿ

ಬೆಂಗಳೂರು, ಅ.16: ಹಿರಿಯ ಪತ್ರಕರ್ತ ನಾಡೋಜ ಪಾಟೀಲ ಪುಟ್ಟಪ್ಪ ಅವರನ್ನು ಸರ್ಕಾರದ ಅತಿಥಿಯನ್ನಾಗಿ ಮಾಡಿಕೊಳ್ಳಲು ಚಿಂತಿಸಬೇಕು ಎಂದು ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯಾ ಆಗ್ರಹಿಸಿದರು.

ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಆಯೋಜಿಸಿದ್ದ ಇಂದುಮತಿ ಪಾಟೀಲ ಪುಟ್ಟಪ್ಪ ಶ್ರದ್ಧಾಂಜಲಿ ಸಭೆಯಲ್ಲಿ ಭಾಗವಹಿಸಿ ಮಾತನಾಡಿದ ಅವರು, ನಾಡಿನ ಹೋರಾಟಗಾರರಾಗಿರುವ ಪಾಟೀಲ ಪುಟ್ಟಪ್ಪ ಅವರ ಅನುಪಮ ಸೇವೆಯನ್ನು ಬಳಸಿಕೊಂಡಲ್ಲಿ ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಧ್ಯ. ಈ ಹಿನ್ನೆಲೆಯಲ್ಲಿ ಅವರನ್ನು ಸರ್ಕಾರದ ಅತಿಥಿಯನ್ನಾಗಿ ಮಾಡಿಕೊಳ್ಳುವುದು ಉಚಿತ ಎಂದು ಸಲಹೆ ನೀಡಿದರು.



ಬೆಂಗಳೂರು: ಗಾಂಧಿ ಭವನದಲ್ಲಿ ಬುಧವಾರ ಏರ್ಪಡಿಸಿದ್ದ ಇಂದುಮತಿ ಪಾಟೀಲ ಪುಟ್ಟಪ್ಪ ಅವರ ಶ್ರದ್ಧಾಂಜಲಿ ಸಭೆಯಲ್ಲಿ ಹೋ. ಶ್ರೀನಿವಾಸಯ್ಯ, ನ್ಯಾಯಮೂರ್ತಿ ವಿ.ಎಸ್. ಮಳೀಮಠ, ನ್ಯಾಯಮೂರ್ತಿ ಎ.ಜೆ. ಸದಾಶಿವ, ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯಾ, ಹನುಮಂತಯ್ಯ, ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಈಗ ಪತಿಯನ್ನು ಕಳೆದುಕೊಂಡು ದುಃಖಿತರಾಗಿರುವ ಪಾಟೀಲ ಪುಟ್ಟಪ್ಪ ಅವರು ಒಬ್ಬಂಟಿಯಾಗಿದ್ದಾರೆ. ಅವರನ್ನು ಒಂಟಿತನ ಕಾಡಬಾರದು. ಅವರು ಬೆಂಗಳೂರಿಗೆ ಬಂದು ನೆಲೆಸಿದರೆ ಇಲ್ಲವೆ ಹುಬ್ಬಳ್ಳಿಯಲ್ಲಿಯೇ ಇದ್ದರೆ ಅವರ ಕಾರ್ಯಚಟುವಟಿಕೆಗಳಿಗೆ ಆಸರೆಯಾಗಿ ಸರ್ಕಾರವೇ ಎಲ್ಲವನ್ನೂ ನಿರ್ವಹಿಸುವಂತಾಗಬೇಕು. ಈ ಬಗ್ಗೆ ಸರ್ಕಾರಕ್ಕೆ ಪತ್ರ ಬರೆಯುವುದಾಗಿ ಹೇಳಿದರು.

ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ ಮಾತನಾಡಿ, ಬಹುತೇಕ ಎಲ್ಲರೂ ಬೆಳೆದಿರುವುದು ಸ್ತ್ರೀಶಕ್ತಿಯಿಂದಲೇ. ಹುಟ್ಟು ಹೋರಾಟಗಾರ ಪಾಟೀಲ ಪುಟ್ಟಪ್ಪನವರ ಆರೋಗ್ಯ, ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದುದು ಇಂದುಮತಿ ಪಾಟೀಲರು. ಪತಿಯ ಸಾಮಾಜಿಕ ಕಳಕಳಿಯ ಹೋರಾಟಗಳಿಗೆ ಬೆಂಬಲವಾಗಿ ನಿಲ್ಲುತ್ತಿದ್ದ ಇಂದುಮತಿಯವರ ಸೇವೆ ಅಪಾರ. ಅವರನ್ನು ನಾಡಿನ ಜನತೆ ನೆನಪಿಸಿಕೊಳ್ಳುವ ಅಗತ್ಯವಿದೆ ಎಂದರು.

ನ್ಯಾಯಮೂರ್ತಿ ವಿ.ಎಸ್. ಮಳೀಮಠ ಮಾತನಾಡಿ, ಪಾಟೀಲ ಪುಟ್ಟಪ್ಪ ಸಾಮಾಜಿಕ ಕಳಕಳಿ ಇರುವ ಧೀಮಂತ. ಸಮಾಜವನ್ನು ಸರಿದಾರಿಗೆ ತರುವಂತಹ ಶಕ್ತಿ ಇರುವಂತಹ ವ್ಯಕ್ತಿ. ಅಂತಹ ಮಹಾನ್ ವ್ಯಕ್ತಿಯ ಬೆಂಗಾವಲಿಗೆ ನಿಂತು, ಶಾಂತಿ, ತಾಳ್ಮೆಯಿಂದ ಪತಿಯ ಹೋರಾಟಕ್ಕೆ ನೆರವಾದವರು ಇಂದುಮತಿ ಪಾಟೀಲ ಪುಟ್ಟಪ್ಪ ಎಂದು ಬಣ್ಣಿಸಿದರು.

ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ, ಕಾಂಗ್ರೆಸ್ ಪಕ್ಷದ ಮುಖಂಡ ಹನುಮಂತಯ್ಯ, ವೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

### ಸಿಎಂ ಸಿದ್ದರಾಮಯ್ಯ ಅವರಿಗೆ ಪಿಜಿಆರ್ ಸಿಂಧ್ಯ ಪತ್ರ

# ಪಾಪುಗೆ ಸರ್ಕಾರಿ ಆತಿಥ್ಯ ಸಿಗಬೇಕು

ದಿಗಂತ ವರದಿ: ಬೆಂಗಳೂರು, ಅ.16

ನಾಡೋಜ ಡಾ.ಪಾಟೀಲ ಪುಟ್ಟಪ್ಪ ಅವರನ್ನು ಸರ್ಕಾರ ಅತಿಥಿಯನ್ನಾಗಿ ಸ್ವೀಕರಿಸಿ ಅವರ ಆಗು-ಹೋಗುಗಳನ್ನು ನೋಡಿಕೊಳ್ಳಬೇಕು ಎಂದು ಮಾಜಿ ಸಚಿವ ಪಿ.ಜಿ.ಆರ್. ಸಿಂಧ್ಯ ಆಗ್ರಹಿಸಿದರು.

ನಗರದಲ್ಲಿ ಬುಧವಾರ ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಆಯೋಜಿಸಿದ್ದ ಇಂದುಮತಿ ಪುಟ್ಟಪ್ಪ ಪಾಟೀಲ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಕನ್ನಡನಾಡಿನ ಅನುಪಮ ಹೋರಾಟಗಾರರಾದ ಪಾಟೀಲ ಪುಟ್ಟಪ್ಪ ಅವರನ್ನು ಸರ್ಕಾರದ ಅತಿಥಿಯನ್ನಾಗಿ ಮಾಡಿಕೊಂಡು ಅವರ ಕಾರ್ಯಚಟುವಟಿಕೆಗಳನ್ನು ಸರ್ಕಾರವೇ ನಿರ್ವಹಿಸಬೇಕು ಎಂದರು.

**ನಮ್ಮ ಸಮಸ್ಯೆಗೆ ಅವರಲ್ಲಿ ಪರಿಹಾರವಿದೆ**

ಕರ್ನಾಟಕದ ಬಹುತೇಕ ಸಮಸ್ಯೆಗಳಿಗೆ ಪುಟ್ಟಪ್ಪನವರ ಬಳಿ ಪರಿಹಾರವಿದೆ. ಅದನ್ನು ನಾವೆಲ್ಲಾ ಸದುಪಯೋಗ ಪಡಿಸಿಕೊಳ್ಳುವುದು ಅವಶ್ಯಕವಾಗಿದೆ.

ಈ ನಿಟ್ಟಿನಲ್ಲಿ ಸರ್ಕಾರ ಮುಂದಾಗಬೇಕಿದ್ದು ನಾಡಿನ ಸಮಸ್ಯೆಗಳ ಪರಿಹಾರಕ್ಕಾಗಿ ಪಾಟೀಲ ಪುಟ್ಟಪ್ಪ ಅವರ ಸಲಹೆಯನ್ನು ಪಡೆದುಕೊಳ್ಳಬೇಕು ಎಂದು ಹೇಳಿದರು.

**ಒಂಟಿತನ ಕಾಡದಂತೆ ನೋಡಿಕೊಳ್ಳಬೇಕು**

ಪಾಟೀಲ ಪುಟ್ಟಪ್ಪ ಅವರು ಪತ್ನಿ ಇಂದುಮತಿ ಅವರನ್ನು ಕಳೆದುಕೊಂಡು ದುಃಖದಲ್ಲಿದ್ದು ಅವರಿಗೆ ಒಂಟಿತನ ಕಾಡಬಾರದು. ಅವರು ಬೆಂಗಳೂರಿಗೆ ಬಂದರೆ ಅಥವಾ ಹುಬ್ಬಳ್ಳಿಯಲ್ಲಿಯೇ ಇದ್ದರೆ ಅವರ ಕಾರ್ಯಚಟುವಟಿಕೆಗಳನ್ನು ಸರ್ಕಾರವೇ ನಿರ್ವಹಿಸಬೇಕು. ಈ ಸಂಬಂಧ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರಿಗೆ ಪತ್ರ ಬರೆಯಲಾಗುವುದು ಎಂದರು.

**ಪಾಪು ಹೋರಾಟಕ್ಕೆ ಪತ್ನಿ ಬೆಂಬಲ**

ಇದೇ ವೇಳೆ ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ಮಾತನಾಡಿ, ನಾವೆಲ್ಲಾ ಬೆಳದಿರುವುದು ಸ್ತ್ರೀ ಶಕ್ತಿಯಿಂದಲೇ. ಹುಟ್ಟು ಹೋರಾಟಗಾರ ಪಾಟೀಲ ಪುಟ್ಟಪ್ಪ ಅವರ ಆರೋಗ್ಯ ಯೋಗಕ್ಷೇಮ ನಿಭಾಯಿಸುತ್ತಿದ್ದ ಇಂದುಮತಿ ಪಾಟೀಲ ಅವರ ಸೇವೆ ಅಪಾರ. ಪುಟ್ಟಪ್ಪ ಅವರು ಸಾಮಾಜಿಕ ಹೋರಾಟಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಅವರ ಪತ್ನಿ ಕೂಡ ಕಾರಣರು. ಅವರ ತ್ಯಾಗ ಮನೋಭಾವನೆಯಿಂದ ಪುಟ್ಟಪ್ಪ ಈ ಮಟ್ಟಕ್ಕೆ ಬೆಳೆಯಲು ಸಾಧ್ಯವಾಯಿತು ಎಂದು ನೆನಪಿಸಿಕೊಂಡರು. ನಿವೃತ್ತ ನ್ಯಾಯಮೂರ್ತಿಗಳಾದ ವಿ.ಎಸ್. ಮಳಿಮಠ್, ಡಾ.ಎ.ಜೆ. ಸದಾಶಿವ, ಮೇಲ್ಮನೆ ಸದಸ್ಯ ಎಲ್.ಹನುಮಂತಯ್ಯ ಸೇರಿದಂತೆ ಇನ್ನಿತರರು ಉಪಸ್ಥಿತರಿದ್ದರು.

### ಶ್ರದ್ಧಾಂಜಲಿ...



ಬೆಂಗಳೂರಿನಲ್ಲಿ ಬುಧವಾರ ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಆಯೋಜಿಸಿದ್ದ ಇಂದುಮತಿ ಪುಟ್ಟಪ್ಪ ಪಾಟೀಲ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಟ್ರಸ್ಟ್ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ಮಾತನಾಡುತ್ತಿರುವುದು. ಹೂ.ಡೆ. ಕೃಷ್ಣ ಪಿ.ಜಿ. ಆರ್ ಸಿಂಧ್ಯ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ
ಬುಧವಾರ,9 ಅಕ್ಟೋಬರ್ 2013, ಬೆಂಗಳೂರು

## ಲಕ್ಕೂರು ಆನಂದರಿಗೆ ಕಸಾಪ ಅಭಿನಂದನೆ

# ‘ಇತರರನ್ನು ಎಚ್ಚರಿಸುವವನೇ ನೈಜ ಕವಿ’

ವಿಕ ಚಿತ್ರಲೋಕ



ಕೇಂದ್ರ ಸಾಹಿತ್ಯ ಅಕಾಡೆಮಿಯ ‘ಯುವ ಪುರಸ್ಕಾರ’ ಪ್ರಶಸ್ತಿ ಪಡೆದ ಸಾಹಿತಿ ಲಕ್ಕೂರು ಆನಂದ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತು ವತಿಯಿಂದ ಅಭಿನಂದಿಸಲಾಯಿತು. ಸುಬ್ಬು ಹೊಲೆಯಾರ್, ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ, ಪುಂಡಲೀಕ ಹಾಲಂಬಿ ಉಪಸ್ಥಿತರಿದ್ದರು.

**ವಿಕ ಸುದ್ದಿಲೋಕ** ಬೆಂಗಳೂರು

ಒಬ್ಬ ಕವಿ ತಾನು ಎಚ್ಚರಗೊಳ್ಳುವ ಜತೆಗೆ ಇತರರನ್ನೂ ಎಚ್ಚರಗೊಳಿಸುವ ಚಲನಶೀಲತೆ ಹೊಂದಿದಾಗ ಮಾತ್ರ ಯಶಸ್ಸು ಸಾಧ್ಯ ಎಂದು ಕವಿ ಸುಬ್ಬು ಹೊಲೆಯಾರ್ ಅಭಿಪ್ರಾಯಪಟ್ಟರು.

ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ‘ಯುವ ಪುರಸ್ಕಾರ’ ಪ್ರಶಸ್ತಿ ಪುರಸ್ಕಾರ ಪಡೆದ ಸಾಹಿತಿ ಲಕ್ಕೂರು ಆನಂದ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತು ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ಅವರು ಮಾತನಾಡಿದರು. “ಕವಿತೆ, ನಾಟಕಗಳು ಕಲೆಯಾಗಿ ಉಳಿಯದೇ ಅವು ಸಮಾಜದ ಸಂಪರ್ಕ ಸಾಧನವಾಗಬೇಕು. ಅಂಥ ಸಾಧಕ ಶಕ್ತಿ ಲಕ್ಕೂರು ಆನಂದರ ಕಾವ್ಯದಲ್ಲಿದೆ. ‘ಬಟವಾಡೆಯಾಗದ ರಸೀದಿ’ ಗ್ರಂಥದಲ್ಲಿ ತಳಸಮುದಾಯದವರ ನೋವು ವ್ಯಕ್ತವಾಗುತ್ತದೆ. ಅದು ನೊಂದವರ, ಅವಮಾನಕ್ಕೆ ಒಳಗಾದವರಿಗೆ ಸಲ್ಲುವ ಪುಸ್ತಕ,” ಎಂದರು.

> ‘ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಸರಕಾರ ಎರಡು ವರ್ಷಗಳಿಂದಲೂ ಅಧ್ಯಕ್ಷರನ್ನು ನೇಮಕ ಮಾಡದಿರುವುದು ಬೇಸರದ ಸಂಗತಿ. ಅಭಿವೃದ್ಧಿಯಿಂದಲೇ ಎಲ್ಲವನ್ನೂ ಪಡೆಯಲು ಸಾಧ್ಯವಿಲ್ಲ. ಬೌದ್ಧಿಕ ಸಂವಹನಕ್ಕೂ ಮಹತ್ವ ಕೊಡಬೇಕಾದ್ದು ತಮ್ಮ ಜವಾಬ್ದಾರಿ ಎಂಬುದನ್ನು ಸರಕಾರ ಅರಿಯಬೇಕು.
>
> —ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ

**ಸಮ್ಮೇಳನಾಧ್ಯಕ್ಷರಾಗಲಿ:** “ಈ ನಾಡಿನ ಮೂಲ ಬೇರು ಆದಿ ಜನಾಂಗ. ಇವರನ್ನು ಎಂದಿಗೂ ನಿರ್ಲಕ್ಷಿಸ ಬಾರದು. ಮುಂದಿನ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ತಳಸಮುದಾಯದ ಪ್ರತಿನಿಧಿಯೊಬ್ಬರನ್ನು ಸಮ್ಮೇಳನಾಧ್ಯಕ್ಷರನ್ನಾಗಿ ನೇಮಕ ಮಾಡುವ ಮೂಲಕ ಇಡೀ ಸಮುದಾಯವನ್ನು ಪರಿಗಣನೆಗೆ ತೆಗೆದುಕೊಳ್ಳುವ ಕಾರ್ಯವಾಗಬೇಕು,” ಎಂದರು.

ವಿಮರ್ಶಕ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಮಾತನಾಡಿ “ಭಾಷೆಗೆ ಹೊಗಳಿಕೆ ಮತ್ತು ತೆಗಳಿಕೆಯ ಶಕ್ತಿಯಿದೆ. ಆದರೆ ಇವೆರಡನ್ನೂ ಮೀರಿದ ಶಕ್ತಿ ಸಾಹಿತ್ಯಕ್ಕಿದೆ,” ಎಂದರು.

ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಪುಂಡಲೀಕ ಹಾಲಂಬಿ, ಶೇಷಾದ್ರಿಪುರಂ ದತ್ತಿ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ, ಕಾಲೇಜಿನ ಪ್ರಾಚಾರ್ಯ ಡಾ. ಎನ್. ಪ್ರಕಾಶ್ ಉಪಸ್ಥಿತರಿದ್ದರು.

ಉದಯವಾಣಿ ಬೆಂಗಳೂರು
ಬುಧವಾರ | ಅಕ್ಟೋಬರ್ | 9 | 2013

# ಪರಿಶಿಷ್ಟರಿಗೆ ಸಿಗಲಿ ಕಸಾಪ ಅಧ್ಯಕ್ಷಗಿರಿ: ಸುಬ್ಬು ಹೊಲೆಯಾರ

## ಕೇಂದ್ರ ಸಾಹಿತ್ಯ ಅಕಾಡೆಮಿ ಯುವ ಪ್ರಶಸ್ತಿ ಪುರಸ್ಕೃತ ಲಕ್ಕೂರು ಆನಂದರವರಿಗೆ ಅಭಿನಂದನೆ

ಬೆಂಗಳೂರು: 'ಕನ್ನಡ ಭಾಷಾ ಸಾಹಿತ್ಯದ ಜತೆಗೆ ರಾಜ್ಯದ ಗುಡ್ಡಗಾಡು ಮತ್ತು ಸಣ್ಣ ಪ್ರಾದೇಶಿಕ ಭಾಷೆಯ ಸಾಹಿತ್ಯವನ್ನು ಗುರುತಿಸಿ ಪ್ರೋತ್ಸಾಹಿಸುವ ಮೂಲಕ ಮಹತ್ವದ ಸಾಮಾಜಿಕ ಜವಾಬ್ದಾರಿಯನ್ನು ಕನ್ನಡ ಸಾಹಿತ್ಯ ಪರಿಷತ್ ನಿಭಾಯಿಸಬೇಕು' ಎಂದು ಕವಿ ಸುಬ್ಬು ಹೊಲೆಯಾರ ಸಲಹೆ ನೀಡಿದ್ದಾರೆ.

ಕೇಂದ್ರ ಸಾಹಿತ್ಯ ಅಕಾಡೆಮಿ ಯುವ ಪ್ರಶಸ್ತಿ ಪುರಸ್ಕೃತರಾದ ಲಕ್ಕೂರು ಆನಂದ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ ನಗರದಲ್ಲಿ ಸೋಮವಾರ ಹಮ್ಮಿಕೊಂಡಿದ್ದ ಅಭಿನಂದನಾ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡಿ, ಕಸಾಪದ ಪ್ರೋತ್ಸಾಹ ಕಾರ್ಯ ಕೇವಲ ಕನ್ನಡ ಭಾಷಾ ಸಾಹಿತ್ಯಗೆ ಸೀಮಿತವಾಗಬಾರದು. ಶತಮಾನೋತ್ಸವ ಸಂಭ್ರಮದಲ್ಲಿರುವ ಪರಿಷತ್‌ಗೆ ಅಧ್ಯಕ್ಷರಾಗುವ ಅವಕಾಶ ಪರಿಶಿಷ್ಟ ವರ್ಗಕ್ಕೆ ಸೇರಿದ ವ್ಯಕ್ತಿಗೆ ಸಿಗಬೇಕು ಎಂದರು.

'ಲಕ್ಕೂರ್ ಆನಂದ ಅವರು ಬಡತನ ದು:ಖವನ್ನು ತನ್ನ ಬರಹದಲ್ಲಿ ಪ್ರತಿಬಿಂಬಿಸಿ ಸಾಧನೆಗೈದ ಕ್ರಿಯಾಶೀಲ ಬರಹಗಾರ ಮತ್ತು ಯುವಕರಿಗೆ ಮಾದರಿ. ಸಮಾಜದಲ್ಲಿ ಬುದ್ಧಿವಂತರು ಹಲವರಿದ್ದಾರೆ. ಆದರೆ, ಹೃದಯಂತರ ಕೊರತೆಯಿದೆ ಎಂದರು.



ಕೇಂದ್ರ ಸಾಹಿತ್ಯ ಅಕಾಡೆಮಿ ಯುವ ಪ್ರಶಸ್ತಿ ಪುರಸ್ಕೃತರಾದ ಲಕ್ಕೂರು ಆನಂದ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ ನಗರದಲ್ಲಿ ಸನ್ಮಾನಿಸಿ ಗೌರವಿಸಿತು. ಕವಿ ಸುಬ್ಬು ಹೊಲೆಯಾರ, ಪರಿಷತ್ ಅಧ್ಯಕ್ಷ ಪುಂಡಲೀಕ ಹಾಲಂಬಿ, ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಇತರರಿದ್ದರು.

ಪರಿಷತ್ ಅಧ್ಯಕ್ಷ ಪುಂಡಲೀಕ ಹಾಲಂಬಿ, 'ಸಮಾಜದಲ್ಲಿ ಪ್ರತಿಭೆಗೆ ಮತ್ತು ಪ್ರತಿಭಾವಂತರಿಗೆ ಅನ್ಯಾಯವಾಗಬಾರದು. ಅಲ್ಪಸಂಖ್ಯಾತರಿಗೆ – ಹಿಂದುಳಿದವರಿಗೆ ಸೂಕ್ತ ಅವಕಾಶಗಳು ಸಿಗಬೇಕು. ಮನುಷ್ಯತ್ವವನ್ನು ವೃದ್ಧಿಸುವ ಸಾಹಿತ್ಯ ಬೆಳೆಯುವ ಅಗತ್ಯವಿದೆ' ಎಂದರು.

ಅಭಿನಂದನೆ ಸ್ವೀಕರಿಸಿದ ಮಾತನಾಡಿದ ಲಕ್ಕೂರು ಆನಂದ, 'ರಾಜ್ಯದ ಗಡಿಪ್ರದೇಶ ಮತ್ತು ಗ್ರಾಮೀಣ ಭಾಗಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳ ನಡೆಸುವುದರಿಂದ ಹಳ್ಳಿಯ ಪ್ರತಿಭೆಗಳಿಗೆ ಸಾಹಿತ್ಯ ಕುರಿತು ಸ್ಫೂರ್ತಿ ಸಿಗುತ್ತದೆ. ಆ ಮೂಲಕ ಜನರಲ್ಲಿ ಸಾಹಿತ್ಯದ ಒಲವು ವೃದ್ಧಿಯಾಗುತ್ತದೆ' ಎಂದರು. ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ, ಶೇಷಾದ್ರಿಪುರ ದತ್ತಿ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ ಮತ್ತಿತರರು ಹಾಜರಿದ್ದರು.

ವಿಜಯ ಕರ್ನಾಟಕ
ಮಂಗಳವಾರ, 24 ಸೆಪ್ಟೆಂಬರ್ 2013, ಬೆಂಗಳೂರು

# 28ರಂದು ಮಂಗಳ ಗ್ರಹಕ್ಕೆ ಉಪಗ್ರಹ: ರಾಧಾಕೃಷ್ಣನ್



ನಗರದಲ್ಲಿ ಸೋಮವಾರ ವಿಚಾರ ಸಂಕಿರಣವನ್ನು ಇಸ್ರೊ ಅಧ್ಯಕ್ಷ ಡಾ. ಕೆ.ರಾಧಾಕೃಷ್ಣನ್ ಉದ್ಘಾಟಿಸಿದರು. ಬಾಹ್ಯಾಕಾಶ ಎಂಜಿನಿಯರಿಂಗ್ ವಿಭಾಗೀಯ ಮಂಡಳಿಯ ಅಧ್ಯಕ್ಷ ಪ್ರೊ. ಆರ್.ಎಂ.ವಸಗಮ್ ಮತ್ತಿತರರು ಹಾಜರಿದ್ದರು.

**ವಿಕ ಸುದ್ದಿಲೋಕ** ಬೆಂಗಳೂರು

ಇಸ್ರೋದಿಂದ ಇದೇ ತಿಂಗಳ 28ರಂದು ಮಂಗಳಗ್ರಹಕ್ಕೆ ಉಪಗ್ರಹ ಉಡಾವಣೆ ಮಾಡಲಾಗುತ್ತಿದ್ದು, 300 ದಿನಗಳಲ್ಲಿ ತನ್ನ ಕಕ್ಷೆಗೆ ಸೇರಲಿದೆ ಎಂದು ಇಸ್ರೊ ಅಧ್ಯಕ್ಷ ಡಾ.ಕೆ.ರಾಧಾಕೃಷ್ಣನ್ ತಿಳಿಸಿದರು.

ಭಾರತೀಯ ಎಂಜಿನಿಯರ್‌ಗಳ ಸಂಸ್ಥೆಯು ಪ್ರೊ.ಸತೀಶ್ ಧವನ್ ಅವರ ಸ್ಮರಣಾರ್ಥ ಹಮ್ಮಿಕೊಂಡಿದ್ದ ಭಾರತೀಯ ನಾಗರಿಕ ವಿಮಾನಯಾನ ಕ್ಷೇತ್ರದ ಅಭಿವೃದ್ಧಿ- ಮುಂದಿನ ದಾರಿ ಕುರಿತ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಮಂಗಳ ಗ್ರಹಕ್ಕೆ ಉಪಗ್ರಹವನ್ನು ಉಡಾವಣೆ ಮಾಡುತ್ತಿರುವುದು ಇಸ್ರೋದ ಮಹತ್ವದ ಸಾಧನೆಯಾಗಲಿದೆ. ಪ್ರೊ.ಸತೀಶ್ ಧವನ್ ಅವರು ದೇಶದ ಹಲವು ಮಂದಿ ವಿಜ್ಞಾನಿಗಳಿಗೆ ಮಹಾತ್ಮರೆನಿಸಿದ್ದರು. ಈಗಿನ ಅನೇಕ ಬಾಹ್ಯಾಕಾಶ ವಿಜ್ಞಾನಿಗಳು ಅವರ ಶಿಷ್ಯಂದಿರು ಎಂದು ಸ್ಮರಿಸಿದರು.

ರಾಷ್ಟ್ರೀಯ ಬಾಹ್ಯಾಕಾಶ ಪ್ರಯೋಗಾಲಯದ ಮಾಜಿ ನಿರ್ದೇಶಕ ಡಾ.ಟಿ.ಎಸ್.ಪ್ರಹ್ಲಾದ್ ಮಾತನಾಡಿ, ದೇಶವು ಈವರೆಗೆ ನಾಗರಿಕ ವಿಮಾನಯಾನ ಕ್ಷೇತ್ರದಲ್ಲಿ ಮಹತ್ವದ ಸಾಧನೆ ಮಾಡಿಲ್ಲ. ಹಾಗಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧೆ ನೀಡುವಲ್ಲಿ ವಿಫಲವಾಗಿದೆ ಎಂದರು.

ಬಾಹ್ಯಾಕಾಶ ಎಂಜಿನಿಯರಿಂಗ್ ವಿಭಾಗೀಯ ಮಂಡಳಿಯ ಅಧ್ಯಕ್ಷ ಪ್ರೊ. ಆರ್.ಎಂ.ವಸಗಮ್, ಭಾರತೀಯ ಎಂಜಿನಿಯರ್‌ಗಳ ಸಂಸ್ಥೆಯ ಕರ್ನಾಟಕ ಕೇಂದ್ರದ ಅಧ್ಯಕ್ಷ ಡಾ. ಪೋಡೇಟಿ ಕೃಷ್ಣ, ಕಾರ್ಯದರ್ಶಿ ಡಾ. ವಿಜಯಕುಮಾರ್ ಮತ್ತಿತರರು ಉಪಸ್ಥಿತರಿದ್ದರು.

ಈ ಸಂಜೆ

18 ಸೆಪ್ಟೆಂಬರ್, ಬುಧವಾರ, 2013




ಭಾರತೀಯ ಎಂಜಿನಿಯರ್‌ಗಳ ಸಂಸ್ಥೆ ಆಯೋಜಿಸಿದ್ದ ಎಂಜಿನಿಯರ್‌ಗಳ ದಿನಾಚರಣೆಯಲ್ಲಿ ಉದ್ಯಮಿಗಳಾದ ವೈ.ಎಂ.ರೆಡ್ಡಿ, ಸುಂದರ್‌ರಾಜ್, ಲೋಕೋಪಯೋಗಿ ಮುಖ್ಯ ಎಂಜಿನಿಯರ್ ತ್ಯಾಗರಾಜ್ ಅವರನ್ನು ಸನ್ಮಾನಿಸಲಾಯಿತು. ರೂರ್ಕಿ ವಿಶ್ವವಿದ್ಯಾಲಯದ ಮಾಜಿ ಕುಲಪತಿ ಪದ್ಮಶ್ರೀ ಡಾ.ಎಚ್.ಸಿ.ವಿಶ್ವೇಶ್ವರಯ್ಯ, ಸಂಸ್ಥೆಯ ಅಧ್ಯಕ್ಷ ಡಾ.ವೂಡೆ ಪಿ. ಕೃಷ್ಣ, ವಿಜಯಕುಮಾರ್, ಲಾರೆನ್ಸ್ ಸುರೇಂದ್ರ ಮತ್ತಿತರರು ಪಾಲ್ಗೊಂಡಿದ್ದರು.

ಬೆಂಗಳೂರು 4 ಉದಯವಾಣಿ
ಮಂಗಳವಾರ | ಸೆಪ್ಟೆಂಬರ್ | 17 | 2013




## ಪ್ರಶಸ್ತಿ ಪ್ರದಾನ

ಭಾರತೀಯ ಇಂಜಿನಿಯರ್‌ಗಳ ಸಂಸ್ಥೆ ಆಯೋಜಿಸಿದ್ದ 46ನೇ ಇಂಜಿನಿಯರ್‌ಗಳ ದಿನಾಚರಣೆಯಲ್ಲಿ ಪ್ರೊ.ವೈ.ಎಂ.ರೆಡ್ಡಿ, ಉದ್ಯಮಿ ಸುಂದರರಾಜು ಮತ್ತು ಮುಖ್ಯ ಇಂಜಿನಿಯರ್ ಎ.ಎನ್. ತ್ಯಾಗರಾಜ್ ಅವರಿಗೆ ಶ್ರೇಷ್ಠ ಇಂಜಿನಿಯರ್ ಪ್ರಶಸ್ತಿಯನ್ನು ಡಾ.ಎಚ್.ಸಿ.ವಿಶ್ವೇಶ್ವರಯ್ಯ ಪ್ರದಾನ ಮಾಡಿದರು. ಡಾ. ಪ್ರೊಡೇ.ಪಿ.ಕೃಷ್ಣ, ಡಾ.ಪಿ. ವಿಜಯಕುಮಾರ್ ಇದ್ದರು.

ಬೆಂಗಳೂರು ಉದಯವಾಣಿ
ಮಂಗಳವಾರ | ಸೆಪ್ಟೆಂಬರ್ | 17 | 2013

# ಬೆಂಗಳೂರು

ಸನ್ಮಾನ...



ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನಲ್ಲಿ ನಡೆದ ಸಮಾರಂಭದಲ್ಲಿ ವಿಧಾನಪರಿಷತ್ ಸದಸ್ಯ ಪುಟ್ಟಣ್ಣ ಅವರನ್ನು ಸನ್ಮಾನಿಸಲಾಯಿತು.

ಕನ್ನಡ ಪ್ರಭ ಬೆಂಗಳೂರು । ಮಂಗಳವಾರ 17 । ಸೆಪ್ಟೆಂಬರ್ 2013

# ಸರ್ ಎಂವಿ ಹಾದಿಯಲ್ಲಿ ಅಭಿವೃದ್ಧಿ ಸಾಧ್ಯ

## 10 ಸಿಎಂಗೂ ಹೆಚ್ಚು ಕೆಲಸ ಮಾಡಿದ್ದಾರೆ: ವೇಣುಗೋಪಾಲ್



ಶೇಷಾದ್ರಿಪುರ ಪದವಿ ಪೂರ್ವ ಕಾಲೇಜು ಆಯೋಜಿಸಿದ್ದ ಶಿಕ್ಷಕರ ದಿನಾಚರಣೆ ಹಾಗೂ ಸರ್ ಎಂ. ವಿಶ್ವೇಶ್ವರಯ್ಯ ಜಯಂತಿಯಲ್ಲಿ ಯುವಿಸಿಇ ಪ್ರಾಂಶುಪಾಲ ಡಾ. ಕೆ.ಆರ್. ವೇಣುಗೋಪಾಲ್ ಅವರನ್ನು ವಿಧಾನ ಪರಿಷತ್ತಿನ ಸದಸ್ಯ ಪುಟ್ಟಣ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಸನ್ಮಾನಿಸಿದರು. ಕಾಲೇಜಿನ ಪ್ರಾಂಶುಪಾಲೆ ಪ್ರೊ. ಎಂ.ಎನ್. ಸುಭಾಷಿಣಿ ಇದ್ದರು.

**ಬೆಂಗಳೂರು:** ನಾವು ಸರ್. ಎಂ. ವಿಶ್ವೇಶ್ವರಯ್ಯ ಅವರು ರೂಪಿಸಿದ ತಾಂತ್ರಿಕತೆ ನಿಟ್ಟಿನಲ್ಲಿ ಚಿಂತಿಸಿದರೆ ದೇಶದ ಅಭಿವೃದ್ಧಿ ಸಾಧ್ಯ ಎಂದು ಯುವಿಸಿಇ ಪ್ರಾಂಶುಪಾಲ ಡಾ. ಕೆ.ಆರ್. ವೇಣುಗೋಪಾಲ್ ಹೇಳಿದರು.

ಶೇಷಾದ್ರಿಪುರ ಪದವಿ ಪೂರ್ವ ಕಾಲೇಜು ಸೋಮವಾರ ಕಾಲೇಜಿನ ಆವರಣದಲ್ಲಿ ಆಯೋಜಿಸಿದ್ದ 'ಶಿಕ್ಷಕರ ದಿನಾಚರಣೆ ಹಾಗೂ ಸರ್.ಎಂ. ವಿಶ್ವೇಶ್ವರಯ್ಯ ಜಯಂತಿ'ಯಲ್ಲಿ ಸನ್ಮಾನ ಸ್ವೀಕರಿಸಿ ಮಾತನಾಡಿದರು.

ಸರ್ ಎಂವಿ ಅವರು ದೂರದೃಷ್ಟಿಯಿಂದ ಯೋಜನೆಗಳನ್ನು ರೂಪಿಸುತ್ತಿದ್ದರು. ಅವರ ಕಠಿಣ ಪರಿಶ್ರಮ ಮತ್ತು ಪ್ರಮಾಣಿಕತೆ ಅವರನ್ನು ಇಂದು ಈ ಮಟ್ಟಕ್ಕೆ ಕೊಂಡೊಯ್ಯಲು ಸಾಧ್ಯವಾಯಿತು ಎಂದರು.

20 ನಗರ ಪ್ರದೇಶಗಳಿಗೆ ಜಲ ಮತ್ತು ಒಳಚರಂಡಿ ವ್ಯವಸ್ಥೆ ಕಲ್ಪಿಸಿದ ಹಿನ್ನೆಲೆಯಲ್ಲಿ ಅವರಿಗೆ 'ಭಾರತ ರತ್ನ' ಬಿರುದು ಬಂತು. ಇಂದು ಹತ್ತು ಜನ ಮುಖ್ಯಮಂತ್ರಿಗಳು ಮಾಡಲಾಗದ ಕೆಲಸವನ್ನು ಅಂದು ಸರ್ಎಂವಿ ಅವರು ಮಾಡಿದ್ದಾರೆ. ಕೇವಲ ಎಂಜಿನಿಯರ್ ಮಾತ್ರವಲ್ಲದೆ, ಮಹಾರಾಷ್ಟ್ರದ ಎಂಜಿನಿಯರಿಂಗ್ ಕಾಲೇಜೊಂದರಲ್ಲಿ ವಾರಕ್ಕೆ ಎರಡು ಬಾರಿ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಇದು ಶಿಕ್ಷಕ ವೃತ್ತಿ ನೀಡುತ್ತಿದ್ದ ತೃಪ್ತಿಯ ಬಗ್ಗೆ ತಿಳಿಸುತ್ತದೆ ಎಂದರು.

ಈ ಸಮಾರಂಭದಲ್ಲಿ ವಿಧಾನ ಪರಿಷತ್ತಿನ ಸದಸ್ಯ ಪುಟ್ಟಣ್ಣ, ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಅಧ್ಯಕ್ಷ ಬಿ.ಎಂ. ಪಾರ್ಥಸಾರಥಿ, ಕಾಲೇಜಿನ ಪ್ರಾಂಶುಪಾಲೆ ಪ್ರೊ. ಎಂ.ಎನ್. ಸುಭಾಷಿಣಿ, ಸಿಬ್ಬಂದಿ ಕಾರ್ಯದರ್ಶಿ ಎಸ್.ಆರ್. ವೆಂಕಟೇಶ್ ಭಾಗವಹಿಸಿದ್ದರು.

ಪ್ರಜಾವಾಣಿ

ಗುರುವಾರ
12ನೇ ಸೆಪ್ಟೆಂಬರ್ 2013
3A B



## ಉದ್ಘಾಟನೆ

ಆಚಾರ್ಯ ಪಾಠಶಾಲಾ ಎಜುಕೇಷನಲ್ ಟ್ರಸ್ಟ್ ನಗರದಲ್ಲಿ ಈಚೆಗೆ ಆಯೋಜಿಸಿದ್ದ ಕಾರ್ಯಕ್ರಮವನ್ನು ಮೇಯರ್ ಕಟ್ಟೆ ಸತ್ಯನಾರಾಯಣ ಉದ್ಘಾಟಿಸಿದರು. ಪಿ. ಕೃಷ್ಣ ಸ್ವಾಮಿ, ಅಧ್ಯಕ್ಷ ಟಿ.ವಿ. ಮಾರುತಿ, ಪ್ರೊ.ಜಿ.ವೆಂಕಟಸುಬ್ಬಯ್ಯ ಇದ್ದರು

ವಿಜಯ ಕರ್ನಾಟಕ
ಶನಿವಾರ,7 ಸೆಪ್ಟೆಂಬರ್ 2013, ಬೆಂಗಳೂರು




ಎ.ಪಿ.ಎಸ್.ಶಿಕ್ಷಣ ಸಂಸ್ಥೆಯಲ್ಲಿ ನಡೆದ ಶಿಕ್ಷಕರ ದಿನಾಚರಣೆಯನ್ನು ಮೇಯರ್ ಬಿ.ಎಸ್.ಸತ್ಯನಾರಾಯಣ ಉದ್ಘಾಟಿಸಿದರು. ನಿಘಂಟು ತಜ್ಞ ಪ್ರೊ.ಜಿ.ವೆಂಕಟಸುಬ್ಬಯ್ಯ, ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ಸಿ.ಎ.ವಿಷ್ಣುಭರತ್, ಅಧ್ಯಕ್ಷ ಟಿ.ವಿ.ಮಾರುತಿ, ಡಾ.ಪಿ.ಕೃಷ್ಣ ಉಪಸ್ಥಿತರಿದ್ದರು.

ವಿಜಯವಾಣಿ

ಶುಕ್ರವಾರ 6 ಸೆಪ್ಟೆಂಬರ್ 2013




ನಗರದ ಎಪಿಎಸ್ ವಿದ್ಯಾಸಂಸ್ಥೆಯಲ್ಲಿ ಗುರುವಾರ ನಡೆದ ಶಿಕ್ಷಕರ ದಿನಾಚರಣೆ ಕಾರ್ಯಕ್ರಮವನ್ನು ನಿಘಂಟು ತಜ್ಞ ಪ್ರೊ. ಜಿ. ವೆಂಕಟಸುಬ್ಬಯ್ಯ ಉದ್ಘಾಟಿಸಿದರು. ಎಪಿಎಸ್ ಅಧ್ಯಕ್ಷ ಟಿ.ವಿ. ಮಾರುತಿ, ವೂಡೆ ಪಿ ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಗುರುವಾರ, 5-09-2013




ಆಚಾರ್ಯ ಪಾಠಶಾಲೆಯಲ್ಲಿ ನಡೆದ ಶಿಕ್ಷಕರ ದಿನಾಚರಣೆ ಕಾರ್ಯಕ್ರಮದಲ್ಲಿ ಮೇಯರ್ ಕಟ್ಟೆ ಸತ್ಯನಾರಾಯಣ, ನಿಘಂಟು ತಜ್ಞ ಪ್ರೊ. ಜಿ. ವೆಂಕಟಸುಬ್ಬಯ್ಯ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ವೂಡೇ ಪಿ. ಕೃಷ್ಣ, ಟಿ.ವಿ. ಮಾರುತಿ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ ಸೆಪ್ಟೆಂಬರ್ | 4 | 2013

# ಜಾನಪದ ಕಲೆ ಮುಂದಿನ ಪೀಳಿಗೆಗೆ ತಲುಪಲಿ

ಬೆಂಗಳೂರು, ಸೆ. 3: ಇಂದಿನ ಯುವಜನತೆ ಹೆಚ್ಚು ಹೆಚ್ಚು ಜಾನಪದ ಕಲೆಯಲ್ಲಿ ಭಾಗವಹಿಸುವಂತೆ ಮಾಡಿ, ಅದನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯುವ ಕೆಲಸವಾಗಬೇಕಿದೆ ಎಂದು ಡಾ. ವೂಡೇ ಪಿ. ಕೃಷ್ಣ ಅಭಿಪ್ರಾಯಪಟ್ಟರು.

ಇತ್ತೀಚಿಗೆ ರಂಗಸಂಸ್ಥಾನ ಸಂಸ್ಥೆ ಮತ್ತು ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡಿಸ್ ಜಂಟಿಯಾಗಿ ಆಯೋಜಿಸಿದ್ದ 'ಜಾನಪದ ಸಂಪಿಗೆ' ಕಾರ್ಯಕ್ರಮ ಉದ್ಘಾಟನೆ ಮಾಡಿ ಮಾತನಾಡಿದ ಅವರು, ಜಾನಪದ ಕಲೆಗಳು ಯುವ ಮನಸ್ಸನ್ನು ಸೆಳೆಯುವ ಶಕ್ತಿಯಿದೆ.

ಹೀಗಾಗಿ ಇದನ್ನು ಇಂದಿನ ಯುವ ಸಮೂಹಕ್ಕೆ ಪರಿಚಯಿಸಿ ಮುಂದಿನ ತಲೆಮಾರಿಗೆ ತಲುಪಿಸಬೇಕಿದೆ ಎಂದರು.

ಸಾಂಸ್ಕೃತಿಕ ಚಿಂತಕ ಪ್ರೊ. ಎಂ.ಜಿ. ಚಂದ್ರಶೇಖರಯ್ಯ ಮಾತನಾಡಿ, ಮನುಷ್ಯನ ಬೌದ್ಧಿಕ ವಿಕಾಸಕ್ಕೆ ಸಂಗೀತದ ಪಾತ್ರ ತುಂಬಾ ಮಹತ್ವವಾಗಿದೆ. ಹಿಂದೆ ಗ್ರಾಮೀಣ ಜನರು ಸಂಗೀತವನ್ನು ತಮ್ಮ ಬದುಕಿನ ಭಾಗವಾಗಿ ನೋಡುತ್ತಿದ್ದರು. ಜನಪದ ಹಾಡಿನ ಮೂಲಕವೇ ತಮ್ಮ ಬದುಕಿನ ಆಯಾಸ ಕಳೆದು, ಮನರಂಜನೆಗಾಗಿಯೇ ಒಂದೊಂದು ಜನಪದ ಕಲೆ ಸೃಷ್ಟಿ ಮಾಡುತ್ತಿದ್ದರು. ಅವುಗಳ ಮೂಲಕ ಮಾನವೀಯ ಗುಣ ಬೆಳೆಸಿಕೊಂಡು ಸಹನೆಯಿಂದ ಬದುಕುತ್ತಿದ್ದರು. ಆದರೆ, ಇಂದಿನ ನಗರೀಕರಣ ಸಂಸ್ಕೃತಿಯಿಂದ ಜನಪದ ಕಲೆಗಳು ಮಾಯವಾಗುತ್ತಿರುವುದು ಬೇಸರ ತಂದಿದೆ ಎಂದರು.

ಇದಕ್ಕೂ ಮುನ್ನ ಜಾನಪದ ಗೀತೆಗಳ ಸಂಗೀತ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಜಾನಪದ ಗಾಯಕ ಬಂಡ್ಲಹಳ್ಳಿ ವಿಜಯಕುಮಾರ್, ಸಂಸ್ಥೆಯ ಪ್ರಾಂಶುಪಾಲ ಪ್ರೊ. ಜಯರಾಮ್ ಮತ್ತಿತರರು ಉಪಸ್ಥಿತರಿದ್ದರು.



ರಂಗಸಂಸ್ಥಾನ ಸಂಸ್ಥೆ ಮತ್ತು ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡಿಸ್ ಜಂಟಿಯಾಗಿ ಆಯೋಜಿಸಿದ್ದ ಜಾನಪದ ಸಂಪಿಗೆ ಕಾರ್ಯಕ್ರಮವನ್ನು ಡಾ. ವೂಡೇ ಪಿ. ಕೃಷ್ಣ ಉದ್ಘಾಟನೆ ಮಾಡಿದರು. ಸಾಂಸ್ಕೃತಿಕ ಚಿಂತಕ ಪ್ರೊ. ಎಂ.ಜಿ. ಚಂದ್ರಶೇಖರಯ್ಯ, ಸಂಸ್ಥೆಯ ಪ್ರಾಂಶುಪಾಲ ಪ್ರೊ. ಜಯರಾಮ್ ಮತ್ತಿತರರು ಭಾಗವಹಿಸಿದ್ದರು.

# ಜಾನಪದ ಕಲೆ ಉಳಿಸಿ, ಬೆಳೆಸುವ ಅಗತ್ಯವಿದೆ

ಬೆಂಗಳೂರು, ಸೆ.4- ಜಾನಪದ ಗೀತೆಗಳನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವ ಕೆಲಸವನ್ನು ಇಂದಿನ ಯುವ ಜನಾಂಗ ಮಾಡ ಬೇಕಿದ್ದು, ಮನಸ್ಸಿಗೆ ಮುದ ನೀಡುವ ಶಕ್ತಿ ಸಂಗೀತಕ್ಕಿದೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣನುಡಿದರು.

ಕೆಂಗೇರಿ ಉಪನಗರದಲ್ಲಿ ರಂಗಸಂಸ್ಥಾನ ಸಂಸ್ಥೆಯು ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್ ಸಹಯೋಗದಲ್ಲಿ ಆಯೋಜಿಸಿದ್ದ ಜಾನಪದ ಸಂಪಿಗೆ ಎಂಬ ಜಾನಪದ ಸಮೂಹ ಕಾರ್ಯಕ್ರಮದಲ್ಲಿ ಅವರು ಮಾತನಾಡುತ್ತಾ, ಜಾನಪದ ಗೀತೆಗಳ ತರಬೇತಿ ಪಡೆದು ಮುಂದಿನ ತಲೆಮಾರಿಗೆ ಕೊಂಡೊಯ್ಯಬೇಕೆಂದರು.

ಪ್ರೊ. ಎಂ.ಜಿ. ಚಂದ್ರಶೇಖರಯ್ಯ ಮಾತನಾಡಿ, ಮನುಷ್ಯ ಬೌದ್ಧಿಕ ವಿಕಾಸಕ್ಕೆ ಸಂಗೀತ ಕಲೆ ಮುಖ್ಯ ಪಾತ್ರ ವಹಿಸುತ್ತದೆ. ಹಿಂದೆ ಗ್ರಾಮೀಣ ಭಾಗದ ಜನಪದ ಕಲಾವಿದರು ಮನರಂಜನೆಗೆ ತಾವೇ ಒಂದೊಂದು ಕಲೆಗಳನ್ನು ರೂಪಿಸಿಕೊಳ್ಳುತ್ತಿದ್ದರು ಎಂದು ವಿವರಿಸಿದರು.

ರೇಡಿಯೋ ಇನ್ನಿತರ ಮಾಧ್ಯಮಗಳ ಮೇಲೆ ಜನಪದ ಕಲಾವಿದರು ಅವಲಂಬಿತರಾಗಿರಲಿಲ್ಲ. ಮನುಷ್ಯನಿಗೆ ಬೇಕಿರುವ ಮಾನವೀಯ ಗುಣ ಹಾಗೂ ಸಹನೆ ಜನಪದ ಸಾಹಿತ್ಯ ಓದುವುದರಿಂದ ನಮಗೆ ಸಿಗುತ್ತದೆ. ಹಳ್ಳಿಗಳಲ್ಲಿ ಮುಗ್ಧತೆಯನ್ನು ಕಾಣುತ್ತಿದ್ದವು ಈಗ ಅವರು ನಗರಗಳಿಗೆ ವಲಸೆ ಬಂದು ಅವರಲ್ಲಿ ಮುಗ್ಧತೆ ಮಾಯವಾಗುತ್ತಿದೆ ಎಂದು ವಿಷಾದಿಸಿದರು. ಜಾನಪದ ಗಾಯಕ ಬಂಡ್ಲಹಳ್ಳಿ ವಿಜಯ ಕುಮಾರ್, ಪ್ರಾಂಶುಪಾಲ ಪ್ರೊ. ಜಯರಾಮ್ ಉಪಸ್ಥಿತರಿದ್ದರು.



ಜಾನಪದ ಸಂಪಿಗೆ ಜಾನಪದ ಸಮೂಹ ಗಾಯನದಲ್ಲಿ ರಂಗಸಂಸ್ಥಾನ ತಂಡ ಮೂಲೋಕದಯ್ಯ ಮಾತಾಡುಲಿಂಗವೇ, ಸಾಗಲಿಲ್ಲ, ಹೂವಮಾಲೆ, ಸೋಬಾನೆಗೀತೆ, ಎಲ್ಲವನೂಶಿವ, ತವರು ಮನೆ ಮುಂತಾದ ಜಾನಪದ ಗೀತೆಗಳನ್ನು ಹಾಡಿ ಪ್ರೇಕ್ಷಕರ ಮೆಚ್ಚುಗೆ ಪಡೆದರು.

ಈ ಸಂಜೆ
ಮಂಗಳವಾರ, 03 ಸೆಪ್ಟೆಂಬರ್ 2013



ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ಆಯೋಜಿಸಿದ್ದ ಶಿಕ್ಷಕರ ಸ್ನೇಹ-ಸಮ್ಮಿಲನ ಕಾರ್ಯಕ್ರಮದಲ್ಲಿ ಕರ್ನಾಟಕ ಜಾನಪದ ವಿಶ್ವವಿದ್ಯಾಲಯದ ಕುಲಪತಿ ಡಾ. ಅಂಬಳಿಕೆ ಹಿರಿಯಣ್ಣ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

ಪ್ರಜಾವಾಣಿ ಮಂಗಳವಾರ 3ನೇ ಸೆಪ್ಟೆಂಬರ್ 2013




ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಈಚೆಗೆ ನಡೆದ ಕಾರ್ಯಕ್ರಮದಲ್ಲಿ ಶೇಷಾದ್ರಿಪುರ ಮುಖ್ಯ ಶಾಖೆಯ ಪದವಿಪೂರ್ವ ಕಾಲೇಜಿನ ನಿವೃತ್ತ ಪ್ರಾಂಶುಪಾಲ ಪ್ರೊ.ಎಸ್.ಸುರೇಶ್ ಅವರಿಗೆ ಸೇವಾ ಪ್ರಶಸ್ತಿ ಪ್ರದಾನ ಮಾಡಲಾಯಿತು. ಕರ್ನಾಟಕ ಜಾನಪದ ವಿಶ್ವವಿದ್ಯಾಲಯದ ಕುಲಪತಿ ಡಾ.ಅಂಬಳಿಕೆ ಹಿರಿಯಣ್ಣ, ಶೇಷಾದ್ರಿಪುರ ವಿದ್ಯಾಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ ಇತರರು ಚಿತ್ರದಲ್ಲಿದ್ದಾರೆ

# 'ಉದ್ಯೋಗದ ಸರಕಾಗಿ ಶಿಕ್ಷಣ'

ಪ್ರಜಾವಾಣಿ ವಾರ್ತೆ

ಯಲಹಂಕ: 'ಶಿಕ್ಷಣ ಇಂದು ಉದ್ಯೋಗ ಪಡೆದುಕೊಳ್ಳುವಂತಹ ಸರಕಾಗಿ ಮಾರ್ಪಾಡಾಗುತ್ತಿರುವುದು ದೇಶದ ದೊಡ್ಡ ದುರಂತ' ಎಂದು ಕರ್ನಾಟಕ ಜಾನಪದ ವಿಶ್ವವಿದ್ಯಾಲಯದ ಕುಲಪತಿ ಡಾ.ಅಂಬಳಿಕೆ ಹಿರಿಯಣ್ಣ ವಿಷಾದಿಸಿದರು.

ಇಲ್ಲಿನ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಈಚೆಗೆ ಆಯೋಜಿಸಿದ್ದ 'ಸ್ನೇಹ-ಸಮ್ಮಿಲನ' ಕಾರ್ಯಕ್ರಮದಲ್ಲಿ ಅಂಗ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಹಿರಿಯರಿಗೆ ಸೇವಾ ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದರು.

'ನಮ್ಮ ದೇಶೀ ಭಾಷೆಗಳೆಲ್ಲ ಮಾಯವಾಗಿ ಆಂಗ್ಲಭಾಷೆ ಅನ್ನದ ಭಾಷೆಯಾಗುತ್ತಿರುವ ಈ ಸಂದರ್ಭದಲ್ಲಿ ಶಿಕ್ಷಣ ಜೀವನದಲ್ಲಿ ಆತ್ಮವಿಶ್ವಾಸ ತುಂಬುವ ಸಾಧನವಾಗಬೇಕು. ಶಿಕ್ಷಕರು ಎಲ್ಲ ಮೂಲಗಳಿಂದ ಜ್ಞಾನ ಗಳಿಸಿಕೊಂಡು ಅದನ್ನು ವಿದ್ಯಾರ್ಥಿಗಳಿಗೆ ನಿರ್ವ್ಯಂಚನೆಯಿಂದ ಹೇಳುವಂತಹ ಸಾಮರ್ಥ್ಯ ಗಳಿಸಿಕೊಳ್ಳಬೇಕು' ಎಂದರು.

ಶೇಷಾದ್ರಿಪುರ ವಿದ್ಯಾಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ, ಉಪಾಧ್ಯಕ್ಷರಾದ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯೂ.ಎಚ್.ಅನಿಲ್‌ಕುಮಾರ್, ಜಂಟಿ ಕಾರ್ಯದರ್ಶಿ ಎಸ್.ಶೇಷನಾರಾಯಣ, ಕೋಶಾಧ್ಯಕ್ಷ ಬಿ.ಎಂ.ಪಾರ್ಥಸಾರಥಿ ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ 24ನೇ ಸೆಪ್ಟೆಂಬರ್ 2013



## ವಿತರಣೆ

ಗ್ಲೋಬಲ್ ಪೀಸ್ ಎಜುಕೇಷನ್ ಶೇಷಾದ್ರಿಪುರ ಕಾಲೇಜಿನಲ್ಲಿ ಸೋಮವಾರ ಆಯೋಜಿಸಿದ್ದ 'ವಿಶ್ವ ಶಾಂತಿ ದಿನಾಚರಣೆ'ಯಲ್ಲಿ ಎನ್‌ಎಸ್‌ಎಸ್ ಮುಖ್ಯಸ್ಥರಿಗೆ ರೋಟರಿ ಡಿಸ್ಟ್ರಿಕ್ಟ್ ಮಾಜಿ ಗರ್ವನರ್ ಶ್ಯಾಮಲ್ ಕುಮಾರ್ ಸೇನ್ ಅವರು ಪ್ರಮಾಣ ಪತ್ರ ವಿತರಿಸಿದರು.

ಉದಯವಾಣಿ ಬೆಂಗಳೂರು

ಸೋಮವಾರ | ಸೆಪ್ಟೆಂಬರ್ | 2 | 2013



## ಸನ್ಮಾನ...

ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ಆಯೋಜಿಸಿದ್ದ ಶಿಕ್ಷಕರ ಸ್ನೇಹ-ಸಮ್ಮಿಲನ ಕಾರ್ಯಕ್ರಮದಲ್ಲಿ ಕರ್ನಾಟಕ ಜಾನಪದ ವಿವಿ ಕುಲಪತಿ ಡಾ. ಅಂಬಳಿಕೆ ಹಿರಿಯಣ್ಣ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆಯ ಅಧ್ಯಕ್ಷ ಎಸ್. ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಹಾಗೂ ಇತರರಿದ್ದರು.

ಪ್ರಜಾವಾಣಿ
ಮಂಗಳವಾರ
27ನೇ ಆಗಸ್ಟ್ 2013




ಬೆಂಗಳೂರು ವಿಶ್ವವಿದ್ಯಾಲಯದ ಪ್ರಥಮ ದರ್ಜೆ ಕಾಲೇಜುಗಳ ಪ್ರಾಂಶುಪಾಲರ ಸಂಘವು ಶೇಷಾದ್ರಿಪುರ ಕಾಲೇಜಿನಲ್ಲಿ ಸೋಮವಾರ ಹಮ್ಮಿಕೊಂಡಿದ್ದ 'ಉನ್ನತ ಶಿಕ್ಷಣದಲ್ಲಿ ಗುಣಮಟ್ಟವನ್ನು ಉತ್ತಮಪಡಿಸುವ ಉಪಕ್ರಮಗಳು' ಕುರಿತ ರಾಜ್ಯ ಮಟ್ಟದ ಸಮ್ಮೇಳನದಲ್ಲಿ ಟ್ರಸ್ಟ್‌ನ ಕಾರ್ಯದರ್ಶಿ ಡಾ.ವೂಡೇ ಪಿ. ಕೃಷ್ಣ, ನ್ಯಾಕ್ ಸಂಸ್ಥೆಯ ನಿವೃತ್ತ ನಿರ್ದೇಶಕ ಪ್ರೊ.ಎಚ್.ಎ. ರಂಗನಾಥ, ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕಿ ಡಾ.ಬಿ.ಎಲ್.ಭಾಗ್ಯಲಕ್ಷ್ಮಿ ಇತರರು ಭಾಗವಹಿಸಿದ್ದರು -ಪ್ರಜಾವಾಣಿ ಚಿತ್ರ

# ನಿರುದ್ಯೋಗಿಗಳನ್ನು ಸೃಷ್ಟಿಸುವ ತಾಣವಾಗಿ ವಿಶ್ವವಿದ್ಯಾಲಯಗಳು

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಸಮರ್ಪಕ ಕೌಶಲಗಳನ್ನು ಪಡೆಯದೇ ಇರುವ ನಿರುದ್ಯೋಗಿಗಳನ್ನು ಸೃಷ್ಟಿ ಮಾಡುವ ತಾಣವಾಗಿ ಬಹುತೇಕ ವಿಶ್ವವಿದ್ಯಾಲಯಗಳು ರೂಪುಗೊಂಡಿವೆ' ಎಂದು ನ್ಯಾಕ್ ಸಂಸ್ಥೆಯ ನಿವೃತ್ತ ನಿರ್ದೇಶಕ ಪ್ರೊ.ಎಚ್.ಎ.ರಂಗನಾಥ ವಿಷಾದಿಸಿದರು.

ಬೆಂಗಳೂರು ವಿಶ್ವವಿದ್ಯಾಲಯದ ಪ್ರಥಮ ದರ್ಜೆ ಕಾಲೇಜುಗಳ ಪ್ರಾಂಶುಪಾಲರ ಸಂಘವು ಶೇಷಾದ್ರಿಪುರ ಕಾಲೇಜಿನಲ್ಲಿ ಸೋಮವಾರ ಹಮ್ಮಿಕೊಂಡಿದ್ದ 'ಉನ್ನತ ಶಿಕ್ಷಣದಲ್ಲಿ ಗುಣಮಟ್ಟವನ್ನು ಉತ್ತಮಪಡಿಸುವ ಉಪಕ್ರಮಗಳು' ಕುರಿತ ರಾಜ್ಯ ಮಟ್ಟದ ಸಮ್ಮೇಳನದಲ್ಲಿ ಅವರು ಮಾತನಾಡಿದರು.

'ಇತ್ತ ಉದ್ಯೋಗವೂ ಇಲ್ಲದೇ, ಅತ್ತ ಕೌಶಲವೂ ಪಡೆಯದೇ ಇರುವ ವಿದ್ಯಾರ್ಥಿಗಳನ್ನು ರೂಪಿಸುತ್ತಿರುವ ಒಟ್ಟು ಶಿಕ್ಷಣ ವ್ಯವಸ್ಥೆಯ ಬಗ್ಗೆ ಬೇಸರವೆನಿಸುತ್ತಿದೆ. ಪ್ರಾಥಮಿಕ ಶಿಕ್ಷಣವನ್ನು ಉತ್ತಮಪಡಿಸುವ ಜತೆಯಲ್ಲಿ ಉನ್ನತ ಶಿಕ್ಷಣ ವ್ಯವಸ್ಥೆಯಲ್ಲೂ ಸಾಕಷ್ಟು ಸುಧಾರಣೆಗಳು ಆಗಬೇಕಿದೆ' ಎಂದು ಅಭಿಪ್ರಾಯಪಟ್ಟರು.

'ಕಲಿಕೆಯೂ ಕೇವಲ ಪುಸ್ತಕಗಳಿಗೆ ಸೀಮಿತಗೊಂಡಷ್ಟು ಅಪಾಯದ ಮಟ್ಟ ಹೆಚ್ಚು. ಸ್ಥಳೀಯತೆಯನ್ನು ಸಂಪೂರ್ಣವಾಗಿ ಅರ್ಥೈಸಿಕೊಳ್ಳುವುದರ ಜತೆಯಲ್ಲಿ ಜಾಗತಿಕ ಮಟ್ಟದ ಜ್ಞಾನವನ್ನು ಬೆಳೆಸಿಕೊಳ್ಳುವತ್ತ ವಿದ್ಯಾರ್ಥಿಗಳು ದಾಪುಗಾಲು ಹಾಕಬೇಕಿದೆ' ಎಂದು ತಿಳಿಸಿದರು.

'ಉದ್ಯಮಶೀಲತೆ, ಕಲಿಕಾ ಕೌಶಲ ಹಾಗೂ ಅಧ್ಯಯನಶೀಲತೆಯಂತಹ ಶಿಸ್ತನ್ನು ಒದಗಿಸುವತ್ತ ವಿ.ವಿ ಚಿಂತನೆ ನಡೆಸಬೇಕು. ಇದಕ್ಕೆ ಪೂರಕವೆಂಬಂತೆ ಬೋಧಕ ಹಾಗೂ ಶಿಷ್ಯವೃಂದದ ನಡುವೆ ಒಂದು ಸಮನ್ವಯ ಚರ್ಚೆ ಏರ್ಪಡಬೇಕು' ಎಂದು ತಿಳಿಸಿದರು.

ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್‌ನ ಕಾರ್ಯದರ್ಶಿ ಡಾ.ವೂಡೇ ಪಿ. ಕೃಷ್ಣ ಇತರರು ಉಪಸ್ಥಿತರಿದ್ದರು.

ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ವಿದ್ಯಾರ್ಥಿಗಳಿಗೆ ಗಾಂಧಿ ವಿಚಾರಧಾರೆಗಳ ಉಪನ್ಯಾಸ, ರಾಷ್ಟ್ರೀಯ ಸೇವಾ ಯೋಜನಾ ಘಟಕದ ಉದ್ಘಾಟನಾ ಕಾರ್ಯಕ್ರಮದಲ್ಲಿ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ, ಖಜಾಂಚಿ ಬಿ.ಎಂ.ಪಾರ್ಥಸಾರಥಿ, ಪ್ರಾಂಶುಪಾಲರಾದ ಪ್ರೊ.ಎಂ.ಎನ್.ಸುಭಾಷಿಣಿ, ಹಿರಿಯ ಸ್ವಾತಂತ್ರ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ಎಸ್.ರಾಮಲಿಂಗೇಶ್ವರ ಹಾಜರಿದ್ದರು.



ಪ್ರಜಾವಾಣಿ ಮಂಗಳವಾರ 20ನೇ ಆಗಸ್ಟ್ 2013



ಬಸವೇಶ್ವರನಗರ ರೋಟರಿ ಸಂಸ್ಥೆ ಏರ್ಪಡಿಸಿದ್ದ ಸಂವಾದ ಕಾರ್ಯಕ್ರಮವನ್ನು ರೋಟರಿ ಡಿಸ್ಟ್ರಿಕ್ಟ್ ಗವರ್ನರ್ ಕೆ.ಎಸ್.ನಾಗೇಂದ್ರ ಉದ್ಘಾಟಿಸಿದರು. ರೋಟರಿ ಸದಸ್ಯ ಸುಧೀರ್ ಎಸ್. ನವಲೆ, ಬಸವೇಶ್ವರನಗರ ರೋಟರಿ ಸಂಸ್ಥೆಯ ಅಧ್ಯಕ್ಷ ರಾಘವರೆಡ್ಡಿ, ಸಂಸ್ಥೆಯ ಪದಾಧಿಕಾರಿ ಡಾ.ಸಿ.ಎನ್.ಎನ್.ರಾಜು, ಶೇಷಾದ್ರಿಪುರ ಕಾಲೇಜಿನ ಪ್ರಾಂಶುಪಾಲ ಪ್ರೊ.ಮಂಜುನಾಥ್, ಶೇಷಾದ್ರಿಪುರ ಎಜುಕೇಷನ್ ಟ್ರಸ್ಟ್‌ನ ಕಾರ್ಯದರ್ಶಿ ಡಾ.ವೂಡೆ ಪಿ. ಕೃಷ್ಣ ಮತ್ತು ಶ್ರೀನಾಥ್ ಚಿತ್ರದಲ್ಲಿದ್ದಾರೆ.

# ಯುವಜನತೆಗಾಗಿ ರೋಟರಿ ಸಂವಾದ ಕಾರ್ಯಕ್ರಮ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಬಸವೇಶ್ವರನಗರ ರೋಟರಿ ಸಂಸ್ಥೆಯ ವತಿಯಿಂದ ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಯುವಜನರಿಗಾಗಿ ಸಂವಾದ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.

ಸಂವಾದದಲ್ಲಿ 176 ಮಂದಿ ಭಾಗವಹಿಸಿ, ಉತ್ತಮ ಭವಿಷ್ಯ ನಿರ್ಮಾಣದ ಬಗ್ಗೆ ವಿಷಯ ತಜ್ಞರಿಂದ ಮಾಹಿತಿ ಪಡೆದರು. ನಗರವೂ ಸೇರಿದಂತೆ ತುಮಕೂರು, ಕನಕಪುರ, ಹೊಸಕೋಟೆಯ 34 ಶಾಲೆಗಳ ವಿದ್ಯಾರ್ಥಿಗಳು ಸಂವಾದದಲ್ಲಿ ಪಾಲ್ಗೊಂಡಿದ್ದರು.

ರೋಟರಿ ಡಿಸ್ಟ್ರಿಕ್ಟ್ ಗವರ್ನರ್ ಕೆ.ಎಸ್.ನಾಗೇಂದ್ರ ಕಾರ್ಯಕ್ರಮ ಉದ್ಘಾಟಿಸಿದರು. ರೋಟರಿ ಪದಾಧಿಕಾರಿಗಳಾದ ಮಧುರಾ ಛತ್ರಪತಿ, ಮೋಹನ್ ಕುಮಾರ್, ಫಜಲ್ ಮೆಹಮೂದ್ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ 13ನೇ ಆಗಸ್ಟ್ 2013

# 'ಪಠ್ಯೇತರ ಚಟುವಟಿಕೆಯಲ್ಲೂ ಭಾಗವಹಿಸಿ'

ಯಲಹಂಕ: 'ಪದವಿ ಶಿಕ್ಷಣದ ಕಲಾ ವಿಭಾಗದ ಪಠ್ಯಕ್ರಮದಲ್ಲಿ ಪ್ರತಿನಿತ್ಯದ ಎಲ್ಲ ಆಗುಹೋಗುಗಳ ದಾಖಲೆಯಿದೆ. ಆದರೆ, ಆ ವಿಷಯವನ್ನು ಕಾಲಕ್ಕೆ ತಕ್ಕಂತೆ ಪರಿಷ್ಕರಣೆ ಮಾಡದ ಕಾರಣ, ಅದರಲ್ಲಿನ ವಿಷಯಗಳೆಲ್ಲಾ ಒಂದೊಂದು ಪ್ರತ್ಯೇಕ ಕೋರ್ಸ್‌ಗಳಾಗಿ ಹೊರಬರುತ್ತಿವೆ' ಎಂದು ಸಂಗೀತ ನಿರ್ದೇಶಕ ಡಾ. ಹಂಸಲೇಖ ಹೇಳಿದರು.

ಇಲ್ಲಿನ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಸೋಮವಾರ 'ಸೃಷ್ಟಿ' ವಿವಿಧ ವೇದಿಕೆಗಳನ್ನು ಉದ್ಘಾಟಿಸಿ ಅವರು ಮಾತನಾಡಿದರು. 'ವಿದ್ಯಾರ್ಥಿಗಳು ಪಠ್ಯದ ಜೊತೆಗೆ ಪಠ್ಯೇತರ ಚಟುವಟಿಕೆಗಳಲ್ಲಿಯೂ ತೊಡಗಿಸಿಕೊಂಡು ತಮ್ಮ ಪ್ರತಿಭೆಯನ್ನು ತೋರ್ಪಡಿಸಲು ಹಾಗೂ ವ್ಯಕ್ತಿತ್ವ ವಿಕಸನಕ್ಕೆ ನೂತನ ವೇದಿಕೆಗಳು ನೆರವಾಗಲಿವೆ' ಎಂದರು.



ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಸೋಮವಾರ ನಡೆದ ಕಾರ್ಯಕ್ರಮದಲ್ಲಿ ಸಂಗೀತ ನಿರ್ದೇಶಕ ಡಾ.ಹಂಸಲೇಖ ಅವರು ವಿವಿಧ ವೇದಿಕೆಗಳನ್ನು ಉದ್ಘಾಟಿಸಿದರು.

ಶೇಷಾದ್ರಿಪುರ ಕಾಲೇಜಿನ (ಮುಖ್ಯ ಶಾಖೆ) ಪ್ರಾಂಶುಪಾಲ ಡಾ.ಎಂ. ಪ್ರಕಾಶ್, 'ಕಾಲೇಜಿನಲ್ಲಿ 31 ವೇದಿಕೆಗಳನ್ನು ಸ್ಥಾಪಿಸಲಾಗಿದ್ದು, ವಿದ್ಯಾರ್ಥಿಗಳ ಆಸಕ್ತಿ ಮತ್ತು ಅಭಿರುಚಿಗೆ ತಕ್ಕಂತೆ ವೇದಿಕೆಗಳನ್ನು ಆಯ್ಕೆ ಮಾಡಿಕೊಳ್ಳಲು ಮುಕ್ತ ಅವಕಾಶವಿದೆ' ಎಂದರು. ಶೇಷಾದ್ರಿಪುರ ಶಿಕ್ಷಣದತ್ತಿಯ ಕಾರ್ಯದರ್ಶಿ ಡಾ.ವೂಡೆ.ಪಿ.ಕೃಷ್ಣ ಅಧ್ಯಕ್ಷತೆ ವಹಿಸಿದ್ದರು.

ವಿಜಯ ಕರ್ನಾಟಕ
ಶುಕ್ರವಾರ,9 ಆಗಸ್ಟ್ 2013, ಬೆಂಗಳೂರು

# ಚಿತ್ರ ಸುದ್ದಿ

ವಿಕ ಚಿತ್ರಲೋಕ



ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ಏರ್ಪಡಿಸಿದ್ದ 'ನನ್ನ ಭೂಮಿ, ನನ್ನ ಕರ್ತವ್ಯ' ಸೈಕಲ್ ಜಾಥಾ ಮೂಲಕ ಗಿಡ ನೆಡುವ ಕಾರ್ಯಕ್ರಮಕ್ಕೆ ನೆಹರೂ ಯುವ ಕೇಂದ್ರದ ಮಹಾ ನಿರ್ದೇಶಕ ಸಲೀಂ ಅಹಮದ್, ಗುರುವಾರ ಚಾಲನೆ ನೀಡಿದರು.

## ಪರಿಸರ ರಕ್ಷಣೆ ಕುರಿತ 'ನನ್ನ ಭೂಮಿ, ನನ್ನ ಕರ್ತವ್ಯ' ಜಾಗೃತಿ ಕಾರ್ಯಕ್ರಮ

# 'ಪರಿಸರ ರಕ್ಷಣೆ ಯುವಜನತೆಯ ಹೊಣೆ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಪರಿಸರ ರಕ್ಷಣೆ ಮಹತ್ವದ ಜವಾಬ್ದಾರಿ ಯುವಕರ ಮೇಲಿದೆ. ಯುವಕರು ಸ್ವಯಂ ಪ್ರೇರಿತರಾಗಿ ಪರಿಸರ ರಕ್ಷಣೆಯ ಕಾರ್ಯದಲ್ಲಿ ಭಾಗವಹಿಸಬೇಕು' ಎಂದು ನೆಹರು ಯುವ ಕೇಂದ್ರ ಸಂಘಟನೆಯ ಮಹಾ ನಿರ್ದೇಶಕ ಸಲೀಂ ಅಹಮದ್ ಹೇಳಿದರು.

ಶೇಷಾದ್ರಿಪುರ ಕಾಲೇಜಿನ ಎನ್‌ಎಸ್‌ಎಸ್ ಘಟಕವು ನೆಹರು ಯುವ ಕೇಂದ್ರ ಸಂಘಟನೆಯ ಸಹಯೋಗದಲ್ಲಿ ಗುರುವಾರ ಆಯೋಜಿಸಿದ್ದ ಪರಿಸರ ರಕ್ಷಣೆ ಕುರಿತ 'ನನ್ನ ಭೂಮಿ, ನನ್ನ ಕರ್ತವ್ಯ' ಜಾಗೃತಿ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

'ಉತ್ತರಾಖಂಡದ ಪ್ರವಾಹ, ಉತ್ತರ ಕರ್ನಾಟಕದಲ್ಲಿನ ನೆರೆ ಇಂತಹ ದೇಶದಲ್ಲಿನ ಹಲವು ವಿಪತ್ತುಗಳಿಗೆ ಪರಿಸರ ರಕ್ಷಣೆ ಬಗೆಗಿನ ನಿರ್ಲಕ್ಷ್ಯವೇ ಕಾರಣ. ಆದ್ದರಿಂದ ಪ್ರತಿಯೊಬ್ಬರಲ್ಲಿಯೂ ಇದರ ಬಗ್ಗೆ ಜಾಗೃತಿ ಮೂಡಿಸಬೇಕಾದ ಅಗತ್ಯವಿದೆ. ನೆಹರು ಯುವ ಕೇಂದ್ರ ಸಂಘಟನೆಯ ಬೆಳಿಹಬ್ಬದ ಅಂಗವಾಗಿ ಮುಂದಿನ ದಿನಗಳಲ್ಲಿ ರಾಜ್ಯದಾದ್ಯಂತ ಸುಮಾರು 4 ಲಕ್ಷ ಗಿಡ ನೆಡುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು' ಎಂದು ತಿಳಿಸಿದರು.

"ಯುವಕರಲ್ಲಿ ಹೋರಾಟದ ಮನೋಭಾವ ಕಡಿಮೆಯಾಗುತ್ತಿದೆ. ಭ್ರಷ್ಟಾಚಾರ, ಸಾಮಾಜಿಕ ಸಮಸ್ಯೆಗಳ ವಿರುದ್ಧ ಪ್ರತಿಭಟಿಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕು" ಎಂದು ಕಿವಿಮಾತು ಹೇಳಿದರು.

ಕಾಲೇಜಿನ ಪ್ರಾಂಶುಪಾಲ ಡಾ.ಎಂ.ಪ್ರಕಾಶ್ ಮಾತನಾಡಿ, 'ನನ್ನ ಭೂಮಿ, ನನ್ನ ಕರ್ತವ್ಯ' ಕಾರ್ಯಕ್ರಮದ ಅಂಗವಾಗಿ ಇಂದಿನಿಂದ ಎರಡು ದಿನಗಳ ಕಾಲ ನಗರದಿಂದ ಮಡಿಕೇರಿ ವರೆಗೆ ಸೈಕಲ್ ರ‍್ಯಾಲಿ ಮತ್ತು ಪರಿಸರ ರಕ್ಷಣೆಯ ಕುರಿತು ಜಾಗೃತಿ ಮೂಡಿಸುವುದು ಹಾಗೂ ಗಿಡ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಕಾಲೇಜಿನ ಎನ್‌ಎಸ್‌ಎಸ್ ಘಟಕದ 50 ವಿದ್ಯಾರ್ಥಿಗಳು ರ‍್ಯಾಲಿಯಲ್ಲಿ ಭಾಗವಹಿಸಲಿದ್ದಾರೆ. ಎರಡು ದಿನಗಳಲ್ಲಿ 1 ಸಾವಿರ ಗಿಡ ನೆಡಲಾಗುವುದು ಎಂದು ತಿಳಿಸಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ. ಕೃಷ್ಣ ಮಾತನಾಡಿ, ವಿದ್ಯಾರ್ಥಿಗಳು ತಮ್ಮ ತಪ್ಪುಗಳನ್ನು ಕಾಲೇಜು ಹಂತದಲ್ಲಿಯೇ ತಿದ್ದಿಕೊಂಡರೆ ಸಮಾಜದಲ್ಲಿ ಉತ್ತಮ ಪ್ರಜೆಗಳಾಗಲು ಸಾಧ್ಯ. ಸಾಮಾಜಿಕ ಕಳಕಳಿಯನ್ನು ರೂಢಿಸಿಕೊಂಡು ಸಮಾಜಕ್ಕೆ ತಮ್ಮ ಕೊಡುಗೆ ಸಲ್ಲಿಸಬೇಕು ಎಂದರು.

ಕಾರ್ಯಕ್ರಮದ ನಂತರ ಸೈಕಲ್ ರ‍್ಯಾಲಿಗೆ ಚಾಲನೆ ನೀಡಲಾಯಿತು. ನೆಹರು ಯುವ ಕೇಂದ್ರ ಸಂಘಟನೆಯ ಪ್ರಾದೇಶಿಕ ನಿರ್ದೇಶಕ ನಟರಾಜನ್, ಕಾಲೇಜಿನ ಎನ್‌ಎಸ್‌ಎಸ್ ಅಧಿಕಾರಿ ಪ್ರೊ.ಪ್ರತಾಪ್ ಲಿಂಗಯ್ಯ ಮತ್ತಿತರರು ಉಪಸ್ಥಿತರಿದ್ದರು.



ಶೇಷಾದ್ರಿಪುರ ಕಾಲೇಜಿನ ಎನ್‌ಎಸ್‌ಎಸ್ ಘಟಕವು ನೆಹರು ಯುವ ಕೇಂದ್ರ ಸಂಘಟನೆಯ ಸಹಯೋಗದಲ್ಲಿ ಪರಿಸರ ರಕ್ಷಣೆ ಕುರಿತು ಜಾಗೃತಿ ಮೂಡಿಸಲು ನಗರದಿಂದ ಮಡಿಕೇರಿ ವರೆಗೆ ಹಮ್ಮಿಕೊಂಡಿರುವ ಸೈಕಲ್ ರ‍್ಯಾಲಿಗೆ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ. ಕೃಷ್ಣ, ನೆಹರು ಯುವ ಕೇಂದ್ರ ಸಂಘಟನೆಯ ಮಹಾ ನಿರ್ದೇಶಕ ಸಲೀಂ ಅಹಮದ್ ಅವರು ಗುರುವಾರ ಚಾಲನೆ ನೀಡಿದರು. ಕಾಲೇಜಿನ ಪ್ರಾಂಶುಪಾಲ ಡಾ.ಎಂ.ಪ್ರಕಾಶ್ ಮತ್ತಿತರರು ಉಪಸ್ಥಿತರಿದ್ದರು. –ಪ್ರಜಾವಾಣಿ ಚಿತ್ರ

ಉದಯವಾಣಿ ಬೆಂಗಳೂರು

ಭಾನುವಾರ | ಜುಲೈ | 28 | 2013

# ರಾಜ್ಯದಲ್ಲಿ 'ಆಮ್ ಆದ್ಮಿ ಪಾರ್ಟಿ' ಅಧಿಕೃತ ಆರಂಭ

## ■ ಅಧಿಕಾರಕ್ಕೆ ಬಂದ 15 ದಿನದಲ್ಲಿ ಜನಲೋಕಪಾಲ್ ಮಸೂದೆ ಜಾರಿ: ಅರವಿಂದ ಕೇಜ್ರಿವಾಲ್

ಬೆಂಗಳೂರು: ಅಣ್ಣಾ ಹಜಾರೆಯವರ 13 ದಿನಗಳ ಉಪವಾಸದ ನಂತರವೂ ಕೇಂದ್ರ ಸರ್ಕಾರ ಜನಲೋಕಪಾಲ್ ಮಸೂದೆ ಜಾರಿಗೆ ತಂದಿಲ್ಲ. ಆದರೆ ಆಮ್ ಆದ್ಮಿ ಪಾರ್ಟಿ ಅಧಿಕಾರಕ್ಕೆ ಬಂದ 15 ದಿನಗಳಲ್ಲಿ ದೆಹಲಿಯಲ್ಲಿ ಲೋಕಪಾಲ್ ಮಸೂದೆ ಜಾರಿಗೆ ತರುವ ಮೂಲಕ, ದೇಶದಲ್ಲಿಬದಲಾವಣೆಯಮಹಾಭಾರತಆರಂಭಿಸಲಿದೆ ಎಂದುಆದ್ಮಿ ಪಕ್ಷದ ಅಧ್ಯಕ್ಷ ಅರವಿಂದ್ ಕೇಜ್ರಿವಾಲ್ ಭರವಸೆ ನೀಡಿದ್ದಾರೆ.

ಶನಿವಾರ ಇಂದಿರಾನಗರದಲ್ಲಿ 'ಆಮ್ ಆದ್ಮಿ ಪಾರ್ಟಿ'ಯ ರಾಜ್ಯ ಘಟಕಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು. ಲೋಕಪಾಲ್ ಚಳವಳಿ ಸಂದರ್ಭದಲ್ಲಿ ಕಾಂಗ್ರೆಸ್ ನಾಯಕ ದಿಗ್ವಿಜಯ್ ಸಿಂಗ್, ತಾಕತ್ತಿದ್ದರೆ ಚುನಾವಣೆಯಲ್ಲಿ ಗೆದ್ದು ಸಂಸತ್ ಪ್ರವೇಶಿಸಿ ಎಂದು ಸವಾಲು ಹಾಕಿದ್ದರು. ಆ ಸವಾಲನ್ನು ಆಮ್ ಆದ್ಮಿ ಪಾರ್ಟಿ ಸ್ವೀಕರಿಸಿದ್ದು, ದೆಹಲಿ ವಿಧಾನಸಭೆ ಚುನಾವಣೆಯಲ್ಲಿ ಸ್ಪರ್ಧಿಸುತ್ತಿದೆ. ಗೆದ್ದು ಅಧಿಕಾರಕ್ಕೆ ಬರಲಿದೆ ಎಂದು ಕೇಜ್ರಿವಾಲ್ ತಿರುಗೇಟು ನೀಡಿದರು.

**'ಈಟ್' ಇಂಡಿಯಾ' ಕಂಪನಿ:** ಸರ್ಕಾರ ಜಮೀನು ಒತ್ತುವರಿ ಪತ್ತೆ ಕಾರ್ಯಪಡೆ ಮುಖ್ಯಸ್ಥ ವಿ. ಬಾಲಸುಬ್ರಮಣಿಯನ್ ಮಾತನಾಡಿ, 1857ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಇತ್ತು. ಈಗ 'ಈಟ್' ಇಂಡಿಯಾ ಕಂಪನಿ ದೇಶವನ್ನು ಆಳುತ್ತಿದೆ. ಅಧಿಕಾರಿಗಳು ಮತ್ತು ರಾಜಕಾರಣಿಗಳು ಈ ಕಂಪನಿಯ ಷೇರುದಾರರು ಎಂದು ಹೇಳಿದರು.



ನಗರದಲ್ಲಿ ಶನಿವಾರ ನಡೆದ ಎಎಪಿ ರಾಜ್ಯಘಟಕ ಉದ್ಘಾಟನೆಯಲ್ಲಿ ಅರವಿಂದ ಕೇಜ್ರಿವಾಲ್ ಭಾಗವಹಿಸಿದ್ದರು. ದೊರೆಸ್ವಾಮಿ, ವುಡೇ ಕೃಷ್ಣ ಇತರರು ಇದ್ದರು.

ಕನ್ನಡಪ್ರಭ ಗುರುವಾರ 25 । ಜುಲೈ 2013

# ಬಡ, ದುರ್ಬಲರಿಗೆ ಆರೋಗ್ಯ ಸೇವೆ ಅಗತ್ಯ: ಜಯಚಂದ್ರ

## ಇಂಧನ ದುರ್ಬಳಕೆ ತಡೆಯಲು ಸಚಿವರ ಸಲಹೆ



ಭಾರತೀಯ ತಂತ್ರಜ್ಞಾನ ಮಹಾಧಿವೇಶನ ಉದ್ಘಾಟಿಸಿದ ಸಚಿವ ಟಿ.ಬಿ.ಜಯಚಂದ್ರ ಅವರು ಈ ಸಂಬಂಧ ಏರ್ಪಡಿಸಿದ್ದ ವಸ್ತುಪ್ರದರ್ಶನವನ್ನು ವೀಕ್ಷಿಸುತ್ತಿರುವುದು.

ಕ.ಪ್ರ.ವಾರ್ತೆ । ಬೆಂಗಳೂರು । ಜು.24

ತಂತ್ರಜ್ಞಾನ ಕ್ಷೇತ್ರದಲ್ಲಿ ಇತ್ತೀಚಿನ ಬೆಳವಣಿಗೆಗಳ ಲಾಭ ಪಡೆದು ಬಡ ಹಾಗೂ ದುರ್ಬಲ ವರ್ಗದವರಿಗೆ ಉತ್ತಮ ಆರೋಗ್ಯ ಸೇವೆ ಒದಗಿಸುವ ಕೆಲಸವಾಗಬೇಕಿದೆ ಎಂದು ಕಾನೂನು ಸಚಿವ ಟಿ.ಬಿ.ಜಯಚಂದ್ರ ಹೇಳಿದ್ದಾರೆ.

ನಗರದಲ್ಲಿ ಬುಧವಾರ ಭಾರತೀಯ ತಂತ್ರಜ್ಞಾನ ಮಹಾಧಿವೇಶನ ಉದ್ಘಾಟಿಸಿ ಅವರು ಮಾತನಾಡಿದರು.

ತಂತ್ರಜ್ಞರು ಹೆಚ್ಚಿನ ಸಾಮಾಜಿಕ ಕಳಕಳಿಯಿಂದ ಕೆಲಸ ನಿರ್ವಹಿಸಬೇಕು. ಆಧುನಿಕ ಯುಗದಲ್ಲಿ ತಂತ್ರಜ್ಞಾನದ ನೆರವಿನಿಂದ ಜೀವನ ಶೈಲಿಯೇ ಬದಲಾಗಿದೆ. ಆಹಾರ, ಸಂವಹನ ಸೇರಿದಂತೆ ಜೀವನ ಎಲ್ಲಾ ವಿಭಾಗಗಳಲ್ಲೂ ತಂತ್ರಜ್ಞಾನ ಪ್ರಮುಖ ಪಾತ್ರ ವಹಿಸುತ್ತಿದೆ. ಆದ್ದರಿಂದ ತಂತ್ರಜ್ಞಾನದ ಸಾಮರ್ಥ್ಯ ಹೆಚ್ಚಿಸುವತ್ತ ಗಮನ ಹರಿಸಬೇಕಿದೆ. ನ್ಯಾನೋ ತಂತ್ರಜ್ಞಾನಕ್ಕೆ ಹೆಚ್ಚಿನ ಒತ್ತು ನೀಡಬೇಕಿದೆ. ತಂತ್ರಜ್ಞಾನ ಸಾಮರ್ಥ್ಯ ಹೆಚ್ಚಿಸುವ ಮೂಲಕ ಇಂಧನ ದುರ್ಬಳಕೆಯನ್ನು ತಡೆಯಬೇಕು ಎಂದರು.

ಮಾಹಿತಿ ತಂತ್ರಜ್ಞಾನದ ಕ್ಷೇತ್ರದ ಕ್ರಾಂತಿಯ ಪರಿಣಾಮವಾಗಿ ಬೆಂಗಳೂರು ಮಾಹಿತಿ ತಂತ್ರಜ್ಞಾನದ ಪ್ರಮುಖ ನಗರವಾಗಿ ಪರಿವರ್ತನೆಗೊಂಡಿತು. ಸದ್ಯ ನಗರದಲ್ಲಿ 850ಕ್ಕೂ ಅಧಿಕ ಬಹುರಾಷ್ಟ್ರೀಯ ಸಂಸ್ಥೆಗಳಿದ್ದು, 10.5 ಲಕ್ಷ ಉದ್ಯೋಗಿಗಳಿದ್ದಾರೆ. ಅಲ್ಲದೆ, ಇದರಿಂದ ಸುಮಾರು 10.5 ಲಕ್ಷ ಮಂದಿ ಪರೋಕ್ಷವಾಗಿ ಉದ್ಯೋಗಾವಕಾಶ ಪಡೆದಿದ್ದಾರೆ ಎಂದು ತಿಳಿಸಿದರು.

ನಂತರ ಮಾತನಾಡಿದ ನ್ಯಾಷನಲ್ ಡಿಸೈನ್ ಅಂಡ್ ರಿಸರ್ಚ್ ಫೋರಂನ ಸಲಹೆಗಾರ ಲೆಫ್ಟಿನೆಂಟ್ ವಿ.ಜೆ.ಸುಂದರಂ ಮಾತನಾಡಿ, ಸ್ವಾತಂತ್ರ್ಯದ ನಂತರ ವಿದೇಶಿ ತಂತ್ರಜ್ಞಾನದ ನೆರವು ಪಡೆದು ಹೆಲಿಕಾಪ್ಟರ್, ಕ್ಷಿಪಣಿಯನ್ನು ಅಭಿವೃದ್ಧಿಪಡಿಸಲು ಮುಂದಾದಾಗ ಹಲವರು ಹಾಸ್ಯ ಮಾಡಿದ್ದರು. ಆದರೆ, ಇಂದು ಆ ಕ್ಷೇತ್ರದಲ್ಲಿ ನಾವು ಉತ್ತಮ ಸಾಧನೆ ಮಾಡಿದ್ದೇವೆ ಎಂದು ವಿವರಿಸಿದರು.

ಕಾರ್ಯಕ್ರಮದಲ್ಲಿ ಭಾರತೀಯ ಎಂಜಿನಿಯರ್‌ಗಳು ಸಂಸ್ಥೆಯ ವೈಮಾನಿಕ ಎಂಜಿನಿಯರಿಂಗ್ ವಿಭಾಗದ ಮುಖ್ಯಸ್ಥ ಪ್ರೊ.ಆರ್.ಎಂ.ವಾಸಗಮ್, ಅಖಿಲ ಭಾರತ ಉತ್ಪಾದಕರ ಒಕ್ಕೂಟದ ಅಧ್ಯಕ್ಷ ಟಿ.ಸುಧಾಕರ ಪೈ, ಭಾರತೀಯ ಎಂಜಿನಿಯರ್‌ಗಳ ಸಂಸ್ಥೆಯ ರಾಜ್ಯ ಘಟಕದ ಅಧ್ಯಕ್ಷ ವೂಡೆ ಪಿ.ಕೃಷ್ಣ ಉಪಸ್ಥಿತರಿದ್ದರು.

ಉದಯವಾಣಿ

ಗುರುವಾರ | ಜುಲೈ | 25 | 2013



## ವೀಕ್ಷಣೆ...

ಬುಧವಾರ ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ಆರಂಭಗೊಂಡ ಭಾರತೀಯ ತಂತ್ರಜ್ಞಾನ ಮಹಾಧಿವೇಶನವನ್ನು ಉದ್ಘಾಟಿಸಿದ ಸಚಿವ ಟಿ.ಬಿ.ಜಯಚಂದ್ರ, ತಂತ್ರಜ್ಞಾನದ ವಿವಿಧ ಆಯಾಮಗಳನ್ನು ವೀಕ್ಷಿಸಿದರು. ಟಿ. ಸುಧಾಕರ್ ಪೈ, ಲೆಫ್ಟಿನೆಂಟ್ ಜನರಲ್ ವಿ.ಜೆ. ಸುಂದರಂ, ಪ್ರೊ. ಆರ್.ಎಂ. ವಾಸಗಮ್, ಡಾ.ಎಲ್.ವಿ. ಮುರಳಿಕೃಷ್ಣರೆಡ್ಡಿ, ವುಡೇ ಪಿ. ಕೃಷ್ಣ ಇದ್ದರು.

ಸಂಯುಕ್ತ ಕರ್ನಾಟಕ ಜುಲೈ । 25 । 2013



ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ನಡೆದ "ಭಾರತೀಯ ತಂತ್ರಜ್ಞಾನ ಮಹಾಸಮ್ಮೇಳನ"ದ ಉದ್ಘಾಟನಾ ಸಮಾರಂಭದಲ್ಲಿ ಕಾನೂನು ಸಚಿವ ಟಿ.ಬಿ. ಜಯಚಂದ್ರ, ಸುಂದರಂ, ಪ್ರೊ. ಆರ್. ಎಂ. ವಸಗಂ, ಅಖಿಲ ಭಾರತ ಉತ್ಪಾದನಾ ಸಂಘನೆಯ ಅಧ್ಯಕ್ಷ ಟಿ. ಸುಧಾಕರ್ ಪೈ, ವೂಡೇ ಪಿ. ಕೃಷ್ಣ, ಡಾ. ಎಲ್. ವಿ. ಮಲ್ಲಿಕಾರ್ಜುನ ರೆಡ್ಡಿ ಉಪಸ್ಥಿತರಿದ್ದರು.

# 10 ವರ್ಷದಲ್ಲಿ ಐಟಿ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆ

ಬೆಂಗಳೂರು, ಜು. 24: ಮುಂದಿನ 10 ವರ್ಷಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆ ಆಗಲಿದೆ ಎಂದು ಕಾನೂನು ಸಚಿವ ಟಿ.ಬಿ. ಜಯಚಂದ್ರ ಹೇಳಿದರು.

ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ನಡೆದ "ಭಾರತೀಯ ತಂತ್ರಜ್ಞಾನ ಮಹಾಸಮ್ಮೇಳನ"ವನ್ನು ಉದ್ಘಾಟಿಸಿ ಮಾತನಾಡಿದ ಅವರು, ಮಾಹಿತಿ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಬೆಂಗಳೂರು ಮಹತ್ವದ ಹೆಜ್ಜೆಯಿಟ್ಟಿದೆ. ನಗರದಲ್ಲಿ ಇಂದು ಸುಮಾರು 850ಕ್ಕೂ ಐಟಿ ಕಂಪನಿಗಳು ಹುಟ್ಟಿಕೊಂಡಿದ್ದು, ನೇರವಾಗಿ 10.5 ಲಕ್ಷ ಜನರಿಗೆ ಉದ್ಯೋಗಾವಕಾಶ ನೀಡಿದರೆ, ಪರೋಕ್ಷವಾಗಿ 10 ಲಕ್ಷ ಜನರಿಗೆ ಕೆಲಸ ನೀಡಿದೆ. ಇಂತಹ ಒಂದು ಅದ್ಭುತ ಜಾಗತಿಕ ಬದಲಾವಣೆ ಕಳೆದ ಹತ್ತು ವರ್ಷಗಳಲ್ಲಿ ನಡೆದಿದೆ. ಮುಂದಿನ ಹತ್ತು ವರ್ಷಗಳಲ್ಲಿ ಮತ್ತಷ್ಟು ಮಹತ್ತರ ಬದಲಾವಣೆಗಳು ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗಲಿದೆ ಎಂದು ಹೇಳಿದರು.

ತಂತ್ರಜ್ಞಾನದ ಬೆಳವಣಿಗೆಗೆ ನಾಗರೀಕರು ಕೂಡ ಸಹಕರಿಸಬೇಕು ಮತ್ತು ಇದರ ಲಾಭವನ್ನು ಸಹ ಉಪಯೋಗಿಸಿಕೊಳ್ಳಬೇಕು. ತಂತ್ರಜ್ಞಾನ ಕ್ಷೇತ್ರದಲ್ಲಿ ಬೆಂಗಳೂರು ಹಿಂದುಳಿದಿಲ್ಲವಾದರೂ, ಕೃಷಿ ಹಾಗೂ ವೈದ್ಯಕೀಯ ಕ್ಷೇತ್ರಗಳಲ್ಲಿ ಅಭಿವೃದ್ಧಿಯಾಗಬೇಕಿದೆ. ನ್ಯಾನೋ ತಂತ್ರಜ್ಞಾನಕ್ಕೂ ಸಹ ಹೆಚ್ಚಿನ ಪ್ರಾಮುಖ್ಯತೆ ಅಗತ್ಯ ಎಂದು ಹೇಳಿದ ಅವರು, ಹೊಸ ಹೊಸ ಉತ್ಪನ್ನಗಳು ಇಂದು ಮಾರುಕಟ್ಟೆಗೆ ಲಗ್ಗೆಯಿಡುತ್ತಿವೆ. ಆದರೆ, ಅವುಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿ ದೇಶ ಹಿಂದೆ ಬೀಳುತ್ತಿರುವುದು ವಿಪರ್ಯಾಸ ಎಂದು ಅವರು ಬೇಸರ ವ್ಯಕ್ತಪಡಿಸಿದರು.

ಮಾಜಿ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಜಾರಿಗೆ ತಂದ ಐಟಿ ಪಾಲಿಸಿಯಿಂದಾಗಿ ಬೆಂಗಳೂರು ಇಂದು ದಕ್ಷಿಣ ಏಷ್ಯಾದಲ್ಲಿಯೇ ಬೃಹತ್ತಾದ ಮಾಹಿತಿ ಮತ್ತು ತಂತ್ರಜ್ಞಾನ ವ್ಯಾಪ್ತಿಯನ್ನು ಸೃಷ್ಟಿಸಿಕೊಂಡಿದೆ ಎಂದು ಸಚಿವರು ನೆನಪಿಸಿಕೊಂಡರು.

ಮೈಕ್ರೋ ಮತ್ತು ನ್ಯಾನೋ ಸಿಸ್ಟಮ್ಸ್ ನ್ಯಾಷನಲ್ ಡಿಸೈನ್ ಹಾಗೂ ರಿಸರ್ಚ್ ಪೋರಂನ ಸಲಹೆಗಾರ ಸುಂದರಂ ಮಾತನಾಡಿ, ಶ್ರೀರಂಗಪಟ್ಟಣದಲ್ಲಿರುವ 400 ವರ್ಷಗಳಷ್ಟು ಹಳೆಯದಾದ ಟಿಪ್ಪು ಶಸ್ತ್ರಾಗಾರವು ಸ್ಥಳಾಂತರ ವಿಚಾರವಾಗಿ ಸಾಕಷ್ಟು ವಿವಾದಕ್ಕೆ ಗುರಿಯಾಗಿತ್ತು. ಆದರೆ, ಅದನ್ನು ಅತ್ಯಾಧುನಿಕ ತಂತ್ರಜ್ಞಾನ ಉಪಯೋಗಿಸಿ ಸ್ಥಳಾಂತರ ಮಾಡುವ ಯೋಜನೆ ಪ್ರಗತಿಯಲ್ಲಿದೆ.ಎಂದು ಅವರು ಹೇಳಿದರು.

ಸಮ್ಮೇಳನದ ಅಧ್ಯಕ್ಷತೆಯನ್ನು ಅಂತರಿಕ್ಷಾ ಇಂಜಿನಿಯರಿಂಗ್ ವಿಭಾಗದ ಮಂಡಳಿ ಅಧ್ಯಕ್ಷ ಪದ್ಮಶ್ರೀ ಪ್ರೊ. ಆರ್. ಎಂ. ವಸಗಂ ವಹಿಸಿದ್ದರು. ಅಖಿಲ ಭಾರತ ಉತ್ಪಾದನಾ ಸಂಘನೆಯ ಅಧ್ಯಕ್ಷ ಟಿ. ಸುಧಾಕರ್ ಪೈ, ವೂಡೇ ಪಿ. ಕೃಷ್ಣ, ಡಾ. ಎಲ್. ವಿ. ಮಲ್ಲಿಕಾರ್ಜುನ ರೆಡ್ಡಿ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ

ಬೆಂಗಳೂರು



5 ಬುಧವಾರ
24 ಜುಲೈ 2013



ನಿಮ್ಹಾನ್ಸ್ ಸಮ್ಮೇಳನ ಕೇಂದ್ರದಲ್ಲಿ ಉದ್ಘಾಟನೆಗೊಂಡ ಭಾರತೀಯ ತಂತ್ರಜ್ಞಾನ ಸಮ್ಮೇಳನದ ಸಂದರ್ಭದಲ್ಲಿ ಏರ್ಪಡಿಸಲಾಗಿದ್ದ ಪ್ರದರ್ಶನವನ್ನು ಸಚಿವ ಟಿ.ಬಿ. ಜಯಚಂದ್ರ ವೀಕ್ಷಿಸಿದರು.

ಈ ಸಂಜೆ

ಭಾನುವಾರ, 14-07-2013

# ಶಿಸ್ತುಬದ್ಧತೆಯಿಂದ ಯಶಸ್ಸು ಸಾಧ್ಯ : ಚೇತನ್ ರಾಮ್



ಬೆಂಗಳೂರು, ಜು.14-ಯಶಸ್ಸು ಕಂಡ ಕಂಡಲ್ಲಿ ಬೆಳೆಯುವ ಕಾಡು ಕುಸುಮವಲ್ಲ, ಆದಕ್ಕೆ ಆತ್ಮವಿಶ್ವಾಸ, ಸೃಜನಶೀಲ ಮನಸ್ಸು, ಶಿಸ್ತು ಬದ್ಧತೆ, ಸಮಯಪ್ರಜ್ಞೆ ಮತ್ತು ಚುರುಕಿನ ಉತ್ಸಹ, ವ್ಯಕ್ತಿತ್ವದ ಅವಶ್ಯಕತೆ ಇದೆ ಎಂದು ಅಂತರಾಷ್ಟ್ರೀಯ ವ್ಯಕ್ತಿತ್ವ ತರಬೇತುದಾರ ಆರ್.ಎ. ಚೇತನ್ ರಾಮ್ ಅವರು ವಿದ್ಯಾರ್ಥಿಗಳನ್ನು ಹುರಿದುಂಬಿಸಿದರು.

21ನೇ ಶತಮಾನದಲ್ಲಿ ಮನುಷ್ಯನ ವ್ಯಕ್ತಿತ್ವಕ್ಕೆ ಬೆಲೆ ಬಂದಿದ್ದು ಇಂದು ಜ್ಞಾನ ಒಂದು ಶಕ್ತಿಯಾಗಿ ಪರಿವರ್ತನೆಯಾಗಿ, ಜ್ಞಾನವೇ ಶಕ್ತಿ ಎಂಬುದು ಆಧುನಿಕ ಯುಗದ ಬೀಜಮಂತ್ರವಾಗಿ ಪರಿಣಮಿಸಿದೆ ಎಂದು ಅವರು ವಿವರಿಸಿದರು.

ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜು ಪ್ರಥಮ ಪಿ.ಯು. ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಅವರು ವಿದ್ಯಾರ್ಥಿಗಳನುದ್ದೇಶಿಸಿ ಮಾತನಾಡಿದರು.

ಇದೇ ಸಂದರ್ಭದಲ್ಲಿ ಪ್ರಸಕ್ತ ಶೈಕ್ಷಣಿಕ ಸಾಲಿನ ಪ್ರಥಮ ಪಿ.ಯು ಪರೀಕ್ಷೆಯಲ್ಲಿ ವಿಷಯಾವಾರು ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ವಿತರಿಸಲಾಯಿತು. ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಶೇ.80ಕ್ಕಿಂತ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಶೇಷಾದ್ರಿಪುರಂ ಶಿಕ್ಷಣದತ್ತಿಯ ವತಿಯಿಂದ ಐದು ಸಾವಿರ ನಗದು ಬಹುಮಾನ ವಿತರಿಸಲಾಯಿತು.

ಸಮಾರಂಭದಲ್ಲಿ ಶೇಷಾದ್ರಿಪುರಂ ಶಿಕ್ಷಣದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವುಡೇ ಪಿ.ಕೃಷ್ಣ ಅವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಭವ್ಯತೆಯ ಬಗ್ಗೆ, ಇತಿಹಾಸದ ಬಗ್ಗೆ ವಿವರಿಸಿದರು. ಧರ್ಮದರ್ಶಿಗಳಾದ ಡಬ್ಲ್ಯು.ಜಿ.ರಾಮಕೃಷ್ಣ, ಕೃಷ್ಣಸ್ವಾಮಿ, ಸೋಮಯಾಜಲು; ಪ್ರಾಂಶುಪಾಲರಾದ ಚಂದ್ರಿಕಾ ಪುರಾಣಿಕ್ ಮತ್ತು ಪ್ರೋ ಆರ್. ಮಹಾಲಕ್ಷ್ಮಿರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ
ಗುರುವಾರ,11 ಜುಲೈ 2013, ಬೆಂಗಳೂರು

ವಿಕ ಚಿತ್ರಲೋಕ



ಭಾರತೀಯ ಎಂಜಿನಿಯರ್‌ಗಳ ಸಂಘ ಏರ್ಪಡಿಸಿದ್ದ 'ನೀರಿನ ಸಂರಕ್ಷಣೆ' ಕುರಿತ ಜಾಗೃತಿ ಕಾರ್ಯಕ್ರಮದಲ್ಲಿ ಜಲಮಂಡಳಿ ಅಧ್ಯಕ್ಷ ಗೌರವ್ ಗುಪ್ತ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ನಿವೃತ್ತ ವ್ಯವಸ್ಥಾಪಕ ನಿರ್ದೇಶಕ ಶ್ರೀನಿವಾಸ ರೆಡ್ಡಿ ವಿದ್ಯಾರ್ಥಿನಿಯರೊಂದಿಗೆ ಸಂಭಾಷಣೆ ನಡೆಸುತ್ತಿರುವುದು.

ಕನ್ನಡಪ್ರಭ

ಬೆಂಗಳೂರು, ಸೋಮವಾರ 1 ಜುಲೈ 2013

ಸಚಿವ ಎಚ್.ಕೆ. ಪಾಟೀಲ್ ಗಿಡಕ್ಕೆ ನೀರೆರೆಯುವ ಮೂಲಕ ಎಂ.ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮ ಉದ್ಘಾಟಿಸಿದರು. ಯಲ್ಲಪ್ಪ ರೆಡ್ಡಿ, ಎಂ.ವಿ. ರಾಜಶೇಖರನ್, ವಿ. ಗಾಯತ್ರಿ, ಭರಮಗೌಡ್ರ, ರಾಮಜೋಯಿಸ್, ಶ್ರೀನಿವಾಸಯ್ಯ ಇದ್ದರು.



# ಯಾವ ಕೃಷಿ ಕುಟುಂಬವೂ ಆರ್ಥಿಕ ಸಬಲವಲ್ಲ: ಪಾಟೀಲ್

- ಸ್ವಾಭಿಮಾನಿಗಳಾಗಿ ಬದುಕಬೇಕೆಂದಿದ್ದರೆ ಕೃಷಿ ಪದ್ಧತಿ ಬದಲಿಸಿ
- ಜಾಹೀರಾತಿಗೆ ಮಾರು ಹೋಗಿ ರಾಸಾಯನಿಕ ಸೇವನೆ: ಯಲ್ಲಪ್ಪ ರೆಡ್ಡಿ

ಬೆಂಗಳೂರು: ಆಧುನಿಕ ಯುಗದಲ್ಲಿ ಬದುಕಿನ ಅವಶ್ಯಕತೆಗಳನ್ನು ಪೂರೈಸಿಕೊಂಡು ಬದುಕುತ್ತಿರುವ ಯಾವ ಕೃಷಿ ಕುಟುಂಬವೂ ಆರ್ಥಿಕವಾಗಿ ಸಬಲವಾಗಿಲ್ಲ. 100ಕ್ಕೆ 98 ರಷ್ಟು ರೈತರು ಸಾಲಗಾರರಾಗಿದ್ದಾರೆ ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಖಾತೆ ಸಚಿವ ಎಚ್.ಕೆ. ಪಾಟೀಲ್ ಹೇಳಿದ್ದಾರೆ.

ಭಾರತೀಯ ವಿದ್ಯಾಭವನದಲ್ಲಿ ಭಾನುವಾರ ನಡೆದ ಎ.ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು. ಸಾವಯವ ಕೃಷಿ ಅನಿವಾರ್ಯ ಪದ್ಧತಿಯಾಗಿದೆ. ಸ್ವಾಭಿಮಾನಿಗಳಾಗಿ ಬದುಕಬೇಕೆಂದಿದ್ದರೆ ಕೃಷಿ ಪದ್ಧತಿ ಬದಲಾಯಿಸಿಕೊಳ್ಳಿ. ಸರ್ಕಾರದ ಸಹಾಯ ಇಲ್ಲದೆ ಕಾಲ ಮೇಲೆ ನಿಂತುಕೊಳ್ಳುತ್ತೇವೆ ಎನ್ನುವವರಿಗೆ ಸಾವಯವ ಕೃಷಿ ಪರಿಹಾರ ಎಂದು ಹೇಳಿದರು.

ಕೃಷಿಕರು ಬಿಡುವಿಲ್ಲದೆ ದುಡಿದರೂ ಅವರ ಜೀವನಮಟ್ಟ ಸುಧಾರಿಸಿಲ್ಲ. ಮನೆಯಲ್ಲಿ ಒಂದು ಮದುವೆ ಮಾಡಿ ಮುಗಿಸುವಾಗ ಕುತ್ತಿಗೆಗೆ ಬಂದಿರುತ್ತದೆ. ಮದುವೆ ಜತೆಗೆ ಸಾಲದ ರಾಶಿಯೂ ಬಿದ್ದಿರುತ್ತದೆ. ಗ್ರಾಮೀಣ ಭಾಗದ ಜನರಲ್ಲಿ ಸಾವಯವ ಕೃಷಿಯ ಬಗ್ಗೆ ಆಸಕ್ತಿಯೇ ಇಲ್ಲವಾಗಿದೆ. ಅವರಲ್ಲಿ ಈ ಕುರಿತು ಆಸಕ್ತಿ ಬೆಳೆಸಬೇಕಿದೆ. ಗ್ರಾಮೀಣ ಅರ್ಥವ್ಯವಸ್ಥೆಯನ್ನು ಪುನಾರಚಿಸಬೇಕಾಗಿದೆ ಎಂದರು.

ಆಶಯ ಭಾಷಣ ಮಾಡಿದ ಪರಿಸರತಜ್ಞ ಯಲ್ಲಪ್ಪರೆಡ್ಡಿ ಮಾತನಾಡಿ, ನಾವು ಶರೀರದ ತುಂಬಾ ವಿಷ ತುಂಬಿಕೊಂಡಿದ್ದೇವೆ. ಇಂದು ಎಲ್ಲಾ ಆಹಾರಗಳೂ ವಿಷಯುಕ್ತವಾಗಿದೆ. ಕೃಷಿಗೆ ಬೇಕಾದ ಜೈವಿಕ ವ್ಯವಸ್ಥೆ ನಾಶವಾಗಿದೆ. ಜಾಹೀರಾತುಗಳಿಗೆ ಮಾರು ಹೋಗಿ ರಾಸಾಯನಿಕ ವಸ್ತುಗಳನ್ನು ಸೇವಿಸುತ್ತಿದ್ದೇವೆ ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ವಿ. ಗಾಯತ್ರಿ ಅವರ 'ಸಹಜ ಸಾಗುವಳಿ' ಪುಸ್ತಕ ಬಿಡುಗಡೆ ಮಾಡಲಾಯಿತು. ಸಾವಯವ ಕೃಷಿಕ ಡಿ.ಡಿ. ಭರಮಗೌಡ್ರ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಡಾ.ಹೊ. ಶ್ರೀನಿವಾಸಯ್ಯ ಅಧ್ಯಕ್ಷತೆ ವಹಿಸಿದ್ದರು. ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಶ್ರೇಷ್ಠ ಕೃಷಿಕರಿಗೆ ಪ್ರಶಸ್ತಿ ಪ್ರದಾನ ಮಾಡಿದರು.

# ಅತಿಯಾದ ರಾಸಾಯನಿಕ ಕೃಷಿ ಚಟುವಟಿಕೆಗೆ ಮಾರಕ

ವಿಕ ಚಿತ್ರಲೋಕ



ನಗರದಲ್ಲಿ ಭಾನುವಾರ ಆಯೋಜಿಸಲಾಗಿದ್ದ 'ಸಾವಯವ ಕೃಷಿ - ಸ್ವಾವಲಂಬಿ ಬದುಕು' ಕಾರ್ಯಕ್ರಮವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಎಚ್.ಕೆ.ಪಾಟೀಲ್ ಸಸಿಗೆ ನೀರೆರೆಯುವ ಮೂಲಕ ಉದ್ಘಾಟಿಸಿದರು. ಕೇಂದ್ರ ಮಾಜಿ ಸಚಿವ ರಾಜಶೇಖರನ್ , ಹೊ.ಶ್ರೀನಿವಾಸಯ್ಯ ಮತ್ತು ಅ.ನ.ಯಪ್ಪಪ್ಪ ರೆಡ್ಡಿ ಹಾಜರಿದ್ದರು.

**ವಿಕ ಸುದ್ದಿಲೋಕ,** ಬೆಂಗಳೂರು

'ವಿಷ ಮುಕ್ತ ಆಹಾರ ಹಾಗೂ ವಿಷ ಮುಕ್ತ ಗ್ರಾಮ' ಎಂಬ ಶೀರ್ಷಿಕೆಯಡಿ ಜನತೆಯಲ್ಲಿ ಜಾಗೃತಿ ಮೂಡಿಸಲಾಗುವುದು ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ.ಪಾಟೀಲ್ ಹೇಳಿದರು.

ಗಾಂಧಿಭವನದಲ್ಲಿ ಭಾನುವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಎಂ.ವಿ.ರಾಜಶೇಖರನ್ ದತ್ತಿ ವತಿಯಿಂದ ಆಯೋಜಿಸಿದ್ದ 'ಸಾವಯವ ಕೃಷಿ - ಸ್ವಾವಲಂಬಿ ಬದುಕು ಕೆಲವು ಪ್ರಯೋಗಗಳು' ಕುರಿತ ಉಪನ್ಯಾಸ ಮಾಲೆಯನ್ನು ಉದ್ಘಾಟಿಸಿ ಮಾತನಾಡಿ "ಪ್ರಸ್ತುತ ಬಳಸುತ್ತಿರುವ ರಾಸಾಯನಿಕಗಳಿಂದ ರೈತ ಸಮುದಾಯ ಹೊರಬರಬೇಕು. ಹೆಚ್ಚು ರಾಸಾಯನಿಕಗಳ ಬಳಕೆಯಿಂದಾಗಿ ಬೆಳೆಯುವಂತಹ ಪದಾರ್ಥಗಳು ವಿಷಯುಕ್ತವಾಗುತ್ತಿದೆ," ಎಂದು ಆತಂಕ ವ್ಯಕ್ತಪಡಿಸಿದರು.

"ಈಗಾಗಲೇ ರಾಜ್ಯದಲ್ಲಿ ಸಾವಯವ ಪದ್ಧತಿ ಚಾಲ್ತಿಯಲ್ಲಿದ್ದರೂ, ಗ್ರಾಮೀಣ ರೈತರು ಪರಿಣಾಮಕಾರಿಯಾಗಿ ಗಮನಹರಿಸುತ್ತಿಲ್ಲ. ರಾಷ್ಟ್ರದಲ್ಲಿಯೇ ಇತರೆ ರಾಜ್ಯಗಳಿಗೆ ಸಾವಯವ ಪದ್ಧತಿ ಮಾದರಿಯಾಗಿದ್ದು, ಎಲ್ಲ ರೈತರು ಈ ಪದ್ಧತಿಯನ್ನು ಅಳವಡಿಸಿಕೊಳ್ಳಲು ಮುಂದಾಗಬೇಕು. ಸಾವಯವ ಪದ್ಧತಿಯನ್ನು ಬಳಸಿದಾಕ್ಷಣ ಹೆಚ್ಚು ಲಾಭಗಳಿಸಲು ಸಾಧ್ಯವಾಗುವುದಿಲ್ಲ ಎಂಬ ಮನಸ್ಥಿತಿಯಿಂದ ರೈತರು ಹೊರಬರಬೇಕು," ಎಂದು ಸಲಹೆ ನೀಡಿದರು.

"ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕತೆಯ ಮಟ್ಟ ಅಷ್ಟಾಗಿ ಸುಧಾರಿಸದ ಕಾರಣ ಅಧಿಕಾರಿಗಳು ರೈತ ವರ್ಗವನ್ನು ನಾನಾ ಕೃಷಿಯಲ್ಲಿ ಹೆಚ್ಚು ತೊಡಗಿಕೊಳ್ಳುವಂತೆ ಪ್ರೇರೇಪಿಸಬೇಕು. ರಾಜ್ಯದಲ್ಲಿ ಒಟ್ಟು 20 ಸಾವಿರ ಕೆರೆಗಳಿದ್ದು, 12 ಸಾವಿರ ಕೆರೆಗಳು ನಿರುಪಯುಕ್ತವಾಗಿವೆ. ಇಂತಹ ಕೆರೆಗಳನ್ನು ಶೀಘ್ರವೇ ಪುನಶ್ಚೇತನಗೊಳಿಸಲಾಗುವುದು," ಎಂದು ಹೇಳಿದರು.

ಸಾವಯವ ಕೃಷಿಕ ಡಿ.ಡಿ.ಭರಮಗೌಡ, ಕೇಂದ್ರ ಮಾಜಿ ಸಚಿವ ರಾಜಶೇಖರನ್, ನಿ. ನ್ಯಾ.ರಾಮಾ ಜೋಯಿಸ್, ಪರಿಸರ ತಜ್ಞ ಡಾ.ಅ.ನ.ಯಲ್ಲಪ್ಪ ರೆಡ್ಡಿ, ಪ್ರೊ.ರವಿವರ್ಮ ಕುಮಾರ್, ಸಾವಯವ ತಜ್ಞೆ ವಿ.ಗಾಯತ್ರಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೋ.ಶ್ರೀನಿವಾಸಯ್ಯ, ಉಪಾಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಗೌರವ ಕಾರ್ಯದರ್ಶಿ ಪ್ರೊ.ಜಿ.ಬಿ.ಶಿವರಾಜು ಉಪಸ್ಥಿತರಿದ್ದರು.

■ ಎಂ. ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮ ■ ಗಂಟೆಗೆ 15 ರಿಂದ 20 ರೈತರ ಆತ್ಮಹತ್ಯೆ

# 1200 ಕೆರೆಗಳ ಪುನರುಜ್ಜೀವನಕ್ಕೆ ಯೋಜನೆ

ಬೆಂಗಳೂರು, ಜೂ. 30: ರಾಜ್ಯದ 1200 ಕೆರೆಗಳ ಪುನರುಜ್ಜೀವನಕ್ಕೆ ಸರ್ಕಾರ ಯೋಜನೆ ರೂಪಿಸಲಿದೆ ಎಂದು ಪಂಚಾಯತ್ ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಸಚಿವ ಎಚ್. ಕೆ. ಪಾಟೀಲ್ ತಿಳಿಸಿದ್ದಾರೆ.

ನಗರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಭಾನುವಾರ ಆಯೋಜಿಸಿದ್ದ ಎಂ. ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಗಾಂಧೀ ವಿಚಾರಧಾರೆಗಳು, ಸುಸಂಸ್ಕೃತ ಸಮಾಜ ನಿರ್ಮಾಣ, ಸಾವಯವ ಕೃಷಿ, ಮದ್ಯಪಾನ ನಿರ್ಮೂಲನೆ ಮುಂತಾದ ವಿಷಯಗಳತ್ತ ಜನರು ವಾಲುತ್ತಿರುವುದು ಸಂತಸದ ಸಂಗತಿ. ಈ ಮೊದಲಿಗಿಂತ ಇಂದು ಜನರು ಹೆಚ್ಚು ಗಾಂಧಿ ತತ್ವದೆಡೆಗೆ ಆಕರ್ಷಿತರಾಗುತ್ತಿದ್ದಾರೆ ಎಂದು ಹರ್ಷ ವ್ಯಕ್ತಪಡಿಸಿದರು.

ಭಾರತಕ್ಕೆ ಮೊದಲು ಸಾವಯವ ಕೃಷಿ ನೀತಿ ಬಗ್ಗೆ ಪರಿಚಯಿಸಿದವರು ರೈತರು. ನಮ್ಮ ಪೂರ್ವಜರು ಅನುಸರಿಸಿದ ಕೃಷಿ ನೀತಿಯೇ ಇಂದಿನ ನಮ್ಮ ಸಾವಯವ ಕೃಷಿ ಪದ್ಧತಿಯಾಗಿದೆ. ಇಂದಿನ ದಿನಗಳಲ್ಲಿ ಸ್ವಾವಲಂಬಿಯಾಗಿ ಬದುಕು ನಡೆಸಲು ಸಾವಯವ ಕೃಷಿಯೊಂದೇ ಅದಕ್ಕಿರುವ ದಾರಿ. ಪ್ರಸ್ತುತ ರೈತ ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ್ದಾನೆ. ರಾಜ್ಯದ ಶೇ. 98 ರಷ್ಟು ರೈತರು ಸಾಲಗಾರರಾಗಿದ್ದಾರೆ. ಎಲ್ಲ ರೈತರಿಗೂ ಉತ್ತಮ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸಬೇಕು ಮತ್ತು ಒಪ್ಪಿತವಾಗುವಂತಹ ಯೋಜನೆಗಳನ್ನು ಜಾರಿಗೆ ತರಬೇಕು ಎಂದು ಅವರು ಹೇಳಿದರು.




ಬೆಂಗಳೂರಿನಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಭಾನುವಾರ ಆಯೋಜಿಸಿದ್ದ ಎಂ. ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮವನ್ನು ಪಂಚಾಯತ್ ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ.ಪಾಟೀಲ್ ಉದ್ಘಾಟಿಸಿದರು. ಮೇಲ್ಮನೆ ಸದಸ್ಯ ಎಂ.ವಿ.ರಾಜಶೇಖರನ್, ಪರಿಸರ ತಜ್ಞ ಡಾ. ಅ. ನ.ಯಲ್ಲಪ್ಪ ರೆಡ್ಡಿ ಮತ್ತಿತರರು ಉಪಸ್ಥಿತರಿದ್ದರು.

ರೈತರಿಗೆ ಸಾವಯವ ಕೃಷಿ ಮೇಲೆ ಆಸಕ್ತಿ ಇಲ್ಲದಂತಾಗಿದೆ. ಸಾವಯವ ಕೃಷಿಯಲ್ಲಿ ತೊಡಗುವಂತೆ ಮಾಡಬೇಕಿದೆ. ಹಳ್ಳಿಗಳ ಆರ್ಥಿಕತೆಯನ್ನು ಪುನರ್‌ನಿರ್ಮಾಣ ಮಾಡುವಂತಹ ಕೆಲಸ ಮತ್ತು ಗ್ರಾಮೀಣ ಭಾಗದ ಜನರಿಗಾಗಿ ವಿಶೇಷ ಸವಲತ್ತುಗಳನ್ನು ಒದಗಿಸಬೇಕಿದೆ ಎಂದು ಅವರು ಹೇಳಿದರು.

ವಿಧಾನ ಪರಿಷತ್ ಸದಸ್ಯ ಎಂ. ವಿ. ರಾಜಶೇಖರನ್ ಮಾತನಾಡಿ, ಭಾರತದ ಕೃಷಿ ಪದ್ಧತಿ ವಿಶ್ವದಲ್ಲೇ ಅತ್ಯಂತ ವಿಶಿಷ್ಟವಾದದ್ದು, ಆದರೆ ಇಂದಿನ ರಾಸಾಯನಿಕ ಬಳಕೆಯಿಂದ ಕೃಷಿ ಪದ್ಧತಿ ಬದಲಾಗಿದೆ.

ಭೂಮಿ ವಿಷಮಯವಾಗಿದೆ. ರೈತನ ಮಿತ್ರ ಎರೆಹುಳುಗಳು ಕಾಣೆಯಾಗಿವೆ. ಮುಂಬರುವ ದಿನಗಳಲ್ಲಿ ಭೀಕರತೆಯ ದರ್ಶನ ಕಾದಿದೆ.

ಇದಕ್ಕೆಲ್ಲಾ ಕಾರಣ ಗಾಂಧಿ ವಿಚಾರಧಾರೆಗಳನ್ನು ಮರೆಯುತ್ತಿರುವುದು ಎಂದು ವಿಷಾದ ವ್ಯಕ್ತಪಡಿಸಿದರು.

ಪರಿಸರ ತಜ್ಞ ಡಾ. ಅ. ನ. ಯಲ್ಲಪ್ಪ ರೆಡ್ಡಿ ಮಾತನಾಡಿ, ದೇಶದಲ್ಲಿ ಸಾಮೂಹಿಕ ದಾರಿದ್ರ್ಯ ಹೆಚ್ಚಾಗುತ್ತಿದೆ.

ಅನ್ನ ನೀಡುವ ಭೂಮಿಯು ವಿಷಮಯವಾಗಿದೆ. ಗಂಟೆಗೆ 15 ರಿಂದ 20 ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಕೃಷಿಗೆ ಬೇಕಾದ ಜೈವಿಕ ವ್ಯವಸ್ಥೆ ನಾಶವಾಗಿದೆ.

ಕೇಂದ್ರ ಸರ್ಕಾರಕ್ಕೆ ಗಣಿಗಾರಿಕೆ ನಡೆಸಲು ಒಟ್ಟು ದೇಶದಿಂದ 48 ಸಾವಿರ ಅರ್ಜಿಗಳು ಬಂದಿದ್ದು, ಅದರಲ್ಲಿ ಕರ್ನಾಟಕ ರಾಜ್ಯದ 19 ಸಾವಿರ ಅರ್ಜಿಗಳು ಸೇರಿವೆ ಎಂದು ಆತಂಕ ವ್ಯಕ್ತಪಡಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ. ಹೊ. ಶ್ರೀನಿವಾಸಯ್ಯ ವಹಿಸಿದ್ದರು, ಸಾವಯವ ಕೃಷಿಕ ಡಿ. ಡಿ. ಭರಮಗೌಡ್ರ, ವಿ. ಗಾಯತ್ರಿ, ಡಾ. ವೂಡೇ. ಪಿ. ಕೃಷ್ಣ, ಪ್ರೊ. ಜಿ. ಬಿ. ಶಿವರಾಜು ಮತ್ತಿತರರು ವೇದಿಕೆ ಮೇಲೆ ಉಪಸ್ಥಿತರಿದ್ದರು.

ಉದಯವಾಣಿ

ಸೋಮವಾರ | ಜುಲೈ | 1 | 2013

# 12 ಸಾವಿರ ಕೆರೆ ತುಂಬಿಸಲು ಹೊಸ ಯೋಜನೆ

## ■ ಕೆರೆ ಪುನರುಜ್ಜೀವನಗೊಳಿಸಲು, ಅಂತರ್ಜಲ ಹೆಚ್ಚಿಸಲು ಶೀಘ್ರದಲ್ಲೇ ಹೊಸ ಯೋಜನೆ: ಸಚಿವ ಎಚ್.ಕೆ.ಪಾಟೀಲ್

ಬೆಂಗಳೂರು: ರಾಜ್ಯದಲ್ಲಿ ನಿರ್ಜೀವಗೊಂಡಿರುವ ಸುಮಾರು 12 ಸಾವಿರ ಕೆರೆಗಳನ್ನು ಪುನಃಶ್ಚೇತನಗೊಳಿಸಲು ಶೀಘ್ರವೇ ಹೊಸ ಯೋಜನೆ ಜಾರಿಗೆ ತರುವುದಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್ ಹೇಳಿದ್ದಾರೆ.

ನಗರದ ಗಾಂಧಿ ಭವನದಲ್ಲಿ ಭಾನುವಾರ ನಡೆದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಎಂ.ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮದಲ್ಲಿ 'ಸಾವಯವ ಕೃಷಿ-ಸ್ವಾವಲಂಬಿ ಬದುಕು-ಕೆಲವು ಪ್ರಯೋಜನಗಳು' ಎಂಬ ವಿಷಯ ಕುರಿತು ಮಾತನಾಡಿದ ಸಚಿವರು, ರಾಜ್ಯದಲ್ಲಿ ಸುಮಾರು 20 ಸಾವಿರ ಕೆರೆಗಳಿದ್ದು ಅವುಗಳಲ್ಲಿ 12 ಸಾವಿರ ಕೆರೆಗಳು ನಿರ್ಜೀವಗೊಂಡಿವೆ. ಇದರಿಂದ ಅಂತರ್ಜಲ ಬತ್ತಿ ಹೋಗಿ ಜಲಕ್ಷಾಮ ಹೆಚ್ಚಾಗುತ್ತಿದೆ. ಹೀಗಾಗಿ, ಈ ಕೆರೆಗಳ ಪುನರುಜ್ಜೀವನಕ್ಕೆ ಪ್ರತ್ಯೇಕ ಯೋಜನೆ ರೂಪಿಸಲಾಗುವುದು ಎಂದು ತಿಳಿಸಿದರು.

ನಮ್ಮದು ಕೃಷಿ ಪ್ರಧಾನ ದೇಶ. ಆದರೆ, ನಮ್ಮ ಹಿರಿಯರು ಮಾಡಿದ ಕೃಷಿ ಪದ್ಧತಿಯನ್ನೇ ನಾವೀಗ ಸಾವಯವ ಕೃಷಿ ಎನ್ನುವ ಹೆಸರಿಟ್ಟು ಜಾಹೀರಾತು ಮಾಡುತ್ತಿದ್ದೇವೆ. ಗ್ರಾಮೀಣ ಭಾಗದಲ್ಲಿರುವ ರೈತರು ಆರ್ಥಿಕವಾಗಿ ದುರ್ಬಲರಾಗುತ್ತಿದ್ದಾರೆ. ಆದೇ ಪಟ್ಟಣದಲ್ಲಿ ಒಂದು ಪೆಟ್ಟಿಗೆ ಅಂಗಡಿ ಇಟ್ಟುಕೊಂಡಿರುವವರು ಕೂಡ ಉತ್ತಮ ಜೀವನ ನಡೆಸುತ್ತಿದ್ದಾರೆ. ಆದರೆ, ಹಳ್ಳಿಗಳಲ್ಲಿ ಉಳುಮೆ ಮಾಡುವ ರೈತ ವರ್ಷಕ್ಕೆ ಒಂದು ಜತೆ ಬಟ್ಟೆ ಖರೀದಿಗೂ ಯೋಚಿಸಬೇಕಾದ ಸ್ಥಿತಿಯಿದೆ ಎಂದು ಅವರು ಕಳವಳ ವ್ಯಕ್ತಪಡಿಸಿದರು.

ಕೃಷಿ ಲಾಭದಾಯಕ ಉದ್ಯಮವಾಗಿ ಬೆಳೆದಿಲ್ಲ. ಏಕೆಂದರೆ, ರೈತರು ಬೆಳೆಯುವ ಬೆಳೆಗಳಿಗೆ ಸೂಕ್ತ ಬೆಲೆ-ಮಾರುಕಟ್ಟೆ ದೊರೆಯುತ್ತಿಲ್ಲ. ಈ ಕಾರಣಕ್ಕೆ ಗ್ರಾಮೀಣ ಜನರ ಜೀವನ ಮಟ್ಟ ಸುಧಾರಿಸುತ್ತಿಲ್ಲ. ಹೀಗಾಗಿ, ರೈತರು, ಉತ್ಪಾದನಾ ವೆಚ್ಚವನ್ನು ಕಡಿಮೆ ಮಾಡುವ ಮೂಲಕ ಉತ್ಪನ್ನಗಳಿಗೆ ಉತ್ತಮ ಬೆಲೆ ದೊರೆತರೆ ಮಾತ್ರ ಕೃಷಿಕ ನೆಮ್ಮದಿಯಿಂದ ಬದುಕಲು ಸಾಧ್ಯ ಎಂದು ಪಾಟೀಲ್ ನುಡಿದರು.

ಗ್ರಾಮೀಣ ಅರ್ಥವ್ಯವಸ್ಥೆಯನ್ನು ಸದೃಢಗೊಳಿಸಲು ಸರ್ಕಾರಗಳು ಈವರೆಗೂ ಮಾಡಿರುವ ಪ್ರಯತ್ನಗಳಿಂದ ಸಾಧ್ಯವಾಗಿಲ್ಲ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಜೀವನ ಮಟ್ಟ ಸುಧಾರಣೆಗೆ ಇನ್ನಷ್ಟು ಪರಿಣಾಮಕಾರಿ ಯೋಜನೆ ಜಾರಿಗೊಳಿಸಬೇಕಾದ ಅಗತ್ಯವಿದೆ ಎಂದು ಹೇಳಿದರು.

ರಾಜ್ಯದಲ್ಲಿ ಶೇ.68.7ರಷ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಗಿದ್ದು, ದಿನನಿತ್ಯದ ಅಗತ್ಯಗಳನ್ನು ಪೂರೈಸಿಕೊಳ್ಳುವುದಕ್ಕೆ ಪರದಾಡುವಂಥ ಸ್ಥಿತಿಯಿದೆ. ಅದರಲ್ಲಿಯೂ ರೈತಾಪಿ ವರ್ಗದಲ್ಲಿ ಶೇ.90ರಷ್ಟು ಮಂದಿ ಬಡವರಾಗಿಯೇ ಉಳಿದಿದ್ದಾರೆ. ಉತ್ಪಾದನಾ ವೆಚ್ಚ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಸಾವಯವ ಕೃಷಿಯಿಂದ ಮಾತ್ರ ರೈತರ ಆರ್ಥಿಕ ಸ್ಥಿತಿ ಸುಧಾರಣೆಯಾಗಲು ಸಾಧ್ಯ. ಹೀಗಾಗಿ, ರೈತರು ಸಾವಯವ ಕೃಷಿ ಅಳವಡಿಕೆಗೆ ಹೆಚ್ಚಿನ ಒತ್ತು ನೀಡಬೇಕೆಂದು ಸಲಹೆ ನೀಡಿದರು.



ಬೆಂಗಳೂರಿನಲ್ಲಿ ಭಾನುವಾರ ಆಯೋಜಿಸಲಾಗಿದ್ದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಎಂ.ವಿ. ರಾಜಶೇಖರನ್ ದತ್ತಿ ಕಾರ್ಯಕ್ರಮವನ್ನು ಪಂಚಾಯತ್ ಮತ್ತು ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ.ಪಾಟೀಲ್ ಉದ್ಘಾಟಿಸಿದರು. ಪರಿಸರವಾದಿ ಯಲ್ಲಪ್ಪರೆಡ್ಡಿ, ವಿಧಾನಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್, ರಾಜ್ಯಸಭಾ ಸದಸ್ಯ ರಾಮಾಜೋಯಿಸ್ ಮತ್ತಿತರರಿದ್ದರು.

# ಪಂಚಾಯ್ತಿಗಳಲ್ಲಿ ರಾಷ್ಟ್ರಧ್ವಜ ಹಾರಾಟ ಕಡ್ಡಾಯ?

**ಆ.15ರಿಂದ ರಾಜ್ಯದ ಎಲ್ಲ ಗ್ರಾ.ಪಂ, ತಾ.ಪಂ, ಜಿ.ಪಂ ಕಟ್ಟಡಗಳ ಮೇಲೆ ತ್ರಿವರ್ಣಧ್ವಜ ಹಾರಾಟ ಸಾಧ್ಯತೆ**

ಬೆಂಗಳೂರು: ವಿಧಾನಸೌಧದ ಮೇಲೆ ಹಾರಾಡುವಂತೆ ಇನ್ನು ಮುಂದೆ ನಿತ್ಯ ಬೆಳಗ್ಗೆ 6ರಿಂದ ಸಂಜೆ 6 ಗಂಟೆವರೆಗೆ ರಾಜ್ಯದ ಎಲ್ಲ ಗ್ರಾಮ ಪಂಚಾಯಿತಿ, ತಾಲೂಕ ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿ ಕಚೇರಿಗಳ ಮೇಲೆ ರಾಷ್ಟ್ರಧ್ವಜ ಹಾರಾಡುವ ಸಾಧ್ಯತೆ ಇದೆ.

ಈ ಸಂಬಂಧ ಆಗಸ್ಟ್ 15ರೊಳಗೆ ಸೂಕ್ತ ತೀರ್ಮಾನ ತೆಗೆದುಕೊಂಡು ಸರ್ಕಾರಿ ಆದೇಶ ಹೊರಡಿಸಲಾಗುವುದು. ಖಾದಿ ಉದ್ಯಮಕ್ಕೆ ಉತ್ತೇಜನ ನೀಡುವ ನಿಟ್ಟಿನಲ್ಲಿ ಈ ಕ್ರಮ ಕೈಗೊಳ್ಳಲಾಗುತ್ತಿದೆ ಎಂದು ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಸಚಿವ ಎಚ್.ಕೆ. ಪಾಟೀಲ್ ಹೇಳಿದ್ದಾರೆ.

ಕರ್ನಾಟಕ ಖಾದಿ ಗ್ರಾಮೋದ್ಯೋಗ ಸಂಯುಕ್ತ ಸಂಘ ಮತ್ತು ಹುಬ್ಬಳ್ಳಿ ಖಾದಿ ಗ್ರಾಮೋದ್ಯೋಗಗಳ ಮಾರ್ಗದರ್ಶಕ ಮಂಡಳಿ ಭಾನುವಾರ ನಗರದ ಸೇವಾದಳ ಕಚೇರಿಯಲ್ಲಿ ಏರ್ಪಡಿಸಿದ್ದ ಖಾದಿ ಚಿಂತನಾ ಸಭೆಯಲ್ಲಿ ಪಾಲ್ಗೊಂಡು ಸಚಿವರು ಮಾತನಾಡಿದರು.

ರಾಷ್ಟ್ರಧ್ವಜ ತಯಾರಿಸುವವರು ಹಾಗೂ ಹುಬ್ಬಳ್ಳಿ ಖಾದಿ ಗ್ರಾಮೋದ್ಯೋಗ ಮಂಡಳಿಯ ಬಹುದಿನದ ಬೇಡಿಕೆ ಹಿನ್ನೆಲೆಯಲ್ಲಿ ಈ ತೀರ್ಮಾನ ತೆಗೆದುಕೊಳ್ಳಲಾಗುವುದು ಎಂದು ಸಚಿವರು ಸ್ಪಷ್ಟಪಡಿಸಿದರು.

ಪ್ರತಿದಿನ ವಿಧಾನಸೌಧದ ಮೇಲೆ ಏರಿಸುವಂತೆ ರಾಜ್ಯದ ಎಲ್ಲ ಗ್ರಾಮ ಪಂಚಾಯಿತಿ, ತಾಲೂಕ ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿ ಕಚೇರಿಗಳ ಮೇಲೆ ರಾಷ್ಟ್ರಧ್ವಜ ಹಾರಿಸುವ ಸಂಬಂಧ ಸರ್ಕಾರ ತೀರ್ಮಾನ ತೆಗೆದುಕೊಳ್ಳಬೇಕು.

ಇದರಿಂದ ರಾಷ್ಟ್ರಧ್ವಜಗಳ ಮಾರಾಟ ಹೆಚ್ಚಾಗುತ್ತದೆ. ಆ ಮೂಲಕ ರಾಷ್ಟ್ರದಲ್ಲೇ ಧ್ವಜ ತಯಾರಿಸುವ ಏಕೈಕ ಸಂಸ್ಥೆಗೆ ಆರ್ಥಿಕ ಬಲ ಬಂದಂತಾಗುತ್ತದೆ ಎಂಬುದು ಹುಬ್ಬಳ್ಳಿ ಖಾದಿ ಗ್ರಾಮೋದ್ಯಗ ಹಾಗೂ ರಾಷ್ಟ್ರಧ್ವಜ ತಯಾರಿಸುವವರ ಬಹುದಿನದ ಬೇಡಿಕೆ ಆಗಿತ್ತು ಎಂದು ಸಚಿವರು ಈ ಸಂದರ್ಭದಲ್ಲಿ ತಿಳಿಸಿದರು.

# 12 ಸಾವಿರ ಕೆರೆಗಳ ಪುನಶ್ಚೇತನ: ಎಚ್.ಕೆ. ಪಾಟೀಲ್ ಭರವಸೆ

ಬೆಂಗಳೂರು: ರಾಜ್ಯದಲ್ಲಿ ನಿರ್ಜೀವವಾಗಿರುವ 12 ಸಾವಿರ ಕೆರೆಗಳ ಪುನಶ್ಚೇತನಕ್ಕೆ ಸರ್ಕಾರ ಶೀಘ್ರದಲ್ಲಿ ಯೋಜನೆ ರೂಪಿಸಿ, ಕಾರ್ಯಗತಗೊಳಿಸಲಿದೆ ಎಂದು ಸಚಿವ ಎಚ್.ಕೆ. ಪಾಟೀಲ್ ತಿಳಿಸಿದ್ದಾರೆ.

ಕರ್ನಾಟಕ ಗಾಂಧೀ ಸ್ಮಾರಕ ನಿಧಿವತಿಯಿಂದ ಗಾಂಧಿ ಭವನದಲ್ಲಿ ಏರ್ಪಡಿಸಲಾಗಿದ್ದ ಶ್ರೀ ಎಂ.ವಿ. ರಾಜಶೇಖರನ್ ದತ್ತಿ ನಿಧಿ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ರಾಜ್ಯದಲ್ಲಿ ಒಟ್ಟು 20 ಸಾವಿರಕ್ಕೂ ಹೆಚ್ಚು ಕೆರೆಗಳಿವೆ. ಇದರಲ್ಲಿ 12 ಸಾವಿರ ಕೆರೆಗಳು ನೀರಿಲ್ಲದೆ ಉಪಯೋಗಕ್ಕೆ ಬಾರದಂತಾಗಿವೆ. ಇವುಗಳನ್ನು ಸರಿಪಡಿಸದಿದ್ದರೆ ಮುಂದಿನ ದಿನಗಳಲ್ಲಿ ಕೆರೆಯ ಜಾಗ ಭೂಗಳ್ಳರ ಪಾಲಾಗುವ ಭಯವಿದೆ. ಇದರಿಂದಾಗಿ ಹೂಳು ತುಂಬಿ ನೀರಿಲ್ಲದೆ ನಿರ್ಜೀವಗೊಂಡಿರುವ ಕೆರೆಗಳ ಪುನರುಜ್ಜೀವನಕ್ಕಾಗಿ ಸರ್ಕಾರ ಯೋಜನೆ ರೂಪಿಸಲಾಗಿದೆ. ಅಲ್ಲದೆ ಅದರ ಕಾಮಗಾರಿಯನ್ನು ಬೇಗ ಪೂರ್ಣಗೊಳಿಸುವಂತೆ ಗುತ್ತಿಗೆದಾರರಿಗೆ ಸೂಚಿಸಲಾಗುವುದು ಎಂದು ತಿಳಿಸಿದರು.

ಗ್ರಾಮೀಣ ಪ್ರದೇಶದ ಅರ್ಥ ವ್ಯವಸ್ಥೆಯನ್ನು ಪುನರ್ ನಿರ್ಮಾಣ ಮಾಡಬೇಕು. ರಾಜ್ಯದಲ್ಲಿ ರೈತರೇ ರಚಿಸಿದ ಸಾವಯವ ಕೃಷಿ ನೀತಿಯಿದೆ. ಇದನ್ನು ರಾಜ್ಯದ ಎಲ್ಲಾ ರೈತರಿಗೂ ತಲುಪಿಸುವ ಕೆಲಸವಾಗಬೇಕಿದೆ. ಆಧುನಿಕ ಕೃಷಿ ಪದ್ಧತಿ ಮಾಡುತ್ತಿರುವವರಿಗೆ ಅದರ ದುಷ್ಪರಿಣಾಮಗಳ ಬಗ್ಗೆ ತಿಳಿಸಿಕೊಡುವ ಅಗತ್ಯವಿದೆ ಎಂದು ಹೇಳಿದರು.

ಪರಿಸರ ತಜ್ಞ ಡಾ. ಅ.ನ. ಯಲ್ಲಪ್ಪ ರೆಡ್ಡಿ ಮಾತನಾಡಿ, ಯಾವುದೇ ಪ್ರಕೃತಿ ವಿಕೋಪ ಸಂಭವಿಸಿದಾಗಲೂ ಅದರ ನಷ್ಟದ ಬಗ್ಗೆಯಷ್ಟೇ ನಾವು ಚಿಂತಿಸುತ್ತೇವೆ. ಆದರೆ ಅದಕ್ಕೆ ಮೂಲ ಕಾರಣವನ್ನು ಹುಡುಕುವ ಪ್ರಯತ್ನ ಮಾಡಬೇಕು. ಕರ್ನಾಟಕದಲ್ಲಿ ದೇಶದಲ್ಲೇ ಅತಿ ಹೆಚ್ಚು ಗಣಗಾರಿಕೆ ನಡೆಯುತ್ತಿದ್ದು, ಅದನ್ನು ತಡೆಯಬೇಕು ಎಂದರು.

ಕಾರ್ಯಕ್ರಮದಲ್ಲಿ ಸಾವಯವ ಕೃಷಿ, ಸ್ವಾವಲಂಬಿ ಬದುಕು ಕೆಲವು ಪ್ರಯೋಗಗಳು ಎಂಬ ವಿಷಯದ ಕುರಿತು ಕೃಷಿ ಪತ್ರಕರ್ತೆ ವಿ. ಗಾಯತ್ರಿ ಉಪನ್ಯಾಸ ನೀಡಿದರು.

ಸುಪ್ರೀಂಕೋರ್ಟ್ ನಿವೃತ್ತ ನ್ಯಾಯಮೂರ್ತಿ ರಾಮಾಜೋಯಿಸ್, ಅಡ್ವೊಕೇಟ್ ಜನರಲ್ ಪ್ರೊ. ರವಿವರ್ಮ ಕುಮಾರ್, ಎಂ.ವಿ. ರಾಜಶೇಖರನ್, ಸಾವಯವ ಕೃಷಿಕ ಡಿ.ಡಿ. ಭರಮಗೌಡ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಮತ್ತಿತರರು ಉಪಸ್ಥಿತರಿದ್ದರು.



ಬೆಂಗಳೂರಿನ ಗಾಂಧಿ ಭವನದಲ್ಲಿ ಭಾನುವಾರ ನಡೆದ ದತ್ತಿ ನಿಧಿ ಕಾರ್ಯಕ್ರಮವನ್ನು ಸಚಿವ ಎಚ್. ಕೆ. ಪಾಟೀಲ್ ಗಿಡಕ್ಕೆ ನೀರು ಹಾಕುವ ಮೂಲಕ ಉದ್ಘಾಟಿಸಿದರು. ಎಂ.ವಿ. ರಾಜಶೇಖರನ್, ಹೊ. ಶ್ರೀನಿವಾಸಯ್ಯ, ನಿವೃತ್ತ ನ್ಯಾಯಮೂರ್ತಿ ರಾಮಾಜೋಯಿಸ್ ಮತ್ತಿತರರು ಉಪಸ್ಥಿತರಿದ್ದರು.

> ಜನರಿಗೆ ವಿಷಮುಕ್ತ ಆಹಾರ ನೀಡಲು ಸರ್ಕಾರ ಎಲ್ಲಾ ಪ್ರಯತ್ನ ಮಾಡಲಿದೆ. ಇದಕ್ಕೆ ರೈತರ ಸಹಕಾರ ಅತ್ಯಗತ್ಯ. ಆಧುನಿಕ ರಾಸಾಯನಿಕ ಕೃಷಿಗಿಂತ ಹೆಚ್ಚಾಗಿ, ಸಾವಯವ ಮತ್ತು ನೈಸರ್ಗಿಕ ಕೃಷಿಯತ್ತ ವಾಲುವುದು ಅತ್ಯವಶ್ಯಕವಾಗಿದೆ. ಸರ್ಕಾರ ಕೂಡ ರೈತರ ಜೀವನ ಸುಧಾರಣೆಗೆ ಸರ್ಕಾರ ಕ್ರಮ ತೆಗೆದುಕೊಳ್ಳಲಿದೆ.
>
> ಎಚ್.ಕೆ. ಪಾಟೀಲ್ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ

ಈ ಸಂಜೆ
ಮಂಗಳವಾರ, 9 ಜುಲೈ, 2013

# ವಿದ್ಯಾರ್ಥಿ ವೇತನ ವಿತರಣಾ ಸಮಾರಂಭ

ಬೆಂಗಳೂರು, ಜು.9 - ನಗರದ ಶೇಷಾದ್ರಿಪುರಂನ ಪದವಿಪೂರ್ವ ಕಾಲೇಜಿನಲ್ಲಿ ಪ್ರಥಮ ಪಿಯುಸಿ ತರಗತಿಗಳ ಉದ್ಘಾಟನೆ ಹಾಗೂ ವಿದ್ಯಾರ್ಥಿ ವೇತನ ವಿತರಣಾ ಸಮಾರಂಭವನ್ನು ನಾಳೆ ಸಂಜೆ 6 ಗಂಟೆಗೆ ಹಮ್ಮಿಕೊಂಡಿದೆ.

ಶೇಷಾದ್ರಿಪುರಂ ವಿದ್ಯಾಸಂಸ್ಥೆಯ ಅಧ್ಯಕ್ಷ ಎಸ್. ಆರ್. ಪಂಡಿತ್ ಆರಾಧ್ಯ ಅಧ್ಯಕ್ಷತೆ ವಹಿಸಲಿದ್ದು ಅಂತಾರಾಷ್ಟ್ರೀಯ ದೈಹಿಕ ತರಬೇತಿದಾರ ಎಲ್. ಎ. ಚೇತನ್‌ರಾಮ್ ಸಂಸ್ಥೆಯ ಜನರಲ್ ಸೆಕ್ರೆಟರಿ ಡಾ. ವುಡೇ ಪಿ.ಕೃಷ್ಣ ಮತ್ತಿತರರು ಪಾಲ್ಗೊಳ್ಳಲಿದ್ದಾರೆ.

ಪ್ರಜಾವಾಣಿ ಸೋಮವಾರ 1 ಜುಲೈ 2013




ನಗರದ ಗಾಂಧಿಭವನದಲ್ಲಿ ಏರ್ಪಡಿಸಿದ ಸಮಾರಂಭದಲ್ಲಿ ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ. ಪಾಟೀಲ್ ಅವರು ಪುಸ್ತಕವೊಂದನ್ನು ಬಿಡುಗಡೆ ಮಾಡಿದರು. ಮಾಜಿ ಸಚಿವ ಎಂ.ವಿ. ರಾಜಶೇಖರನ್, ಹಿರಿಯ ಗಾಂಧಿವಾದಿ ಹೊ. ಶ್ರೀನಿವಾಸಯ್ಯ, ಪರಿಸರವಾದಿ ಯಲ್ಲಪ್ಪರೆಡ್ಡಿ, ರಾಜ್ಯಸಭಾ ಸದಸ್ಯ ರಾಮಜೋಯಿಸ್ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ

ಶುಕ್ರವಾರ 28 ಜೂನ್ 2013

# ಮದ್ಯ ವ್ಯಸನಕ್ಕೆ ಶೇ 15ರಷ್ಟು ಜನರು ಬಲಿ- ಆತಂಕ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ನಮ್ಮ ದೇಶದಲ್ಲಿ ಪ್ರತಿ ವರ್ಷ ಶೇಕಡಾ 15 ರಷ್ಟು ಜನರು ಮದ್ಯವ್ಯಸನಕ್ಕೆ ಬಲಿಯಾಗುತ್ತಿದ್ದಾರೆ' ಎಂದು ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ಕಾರ್ಯದರ್ಶಿ ಬಸವ ರಾಜು ಆತಂಕ ವ್ಯಕ್ತಪಡಿಸಿದರು.

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಹಾಗೂ ಗಾಂಧಿ ಸ್ಮಾರಕ ನಿಧಿಯ ಆಶ್ರಯದಲ್ಲಿ ನಗರದ ಗಾಂಧಿ ಭವನದಲ್ಲಿ ಈಚೆಗೆ ನಡೆದ 'ವಿಶ್ವ ಮಾದಕ ವಸ್ತು ವಿರೋಧಿ ದಿನದ ಅಂಗವಾಗಿ ಯುವಜನರಿಗೆ ಮಾರ್ಗದರ್ಶನ' ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

'ಇಂದಿನ ಯುವಜನರು ತಮ್ಮ ಮನಸ್ಸನ್ನು ನಿಯಂತ್ರಿಸಿಕೊಳ್ಳಬೇಕು. ಜೀವನದಲ್ಲಿ ಆದರ್ಶ, ಧ್ಯೇಯ, ಧೋರಣೆಗಳನ್ನು ಹೊಂದಬೇಕು. ತಮ್ಮ ಜೀವನದಲ್ಲಿ ದೃಢವಾದ ನಂಬಿಕೆ ಮತ್ತು ಒಂದು ಉತ್ತಮವಾದ ಗುರಿಯನ್ನು ಹೊಂದಬೇಕು. ಆಗ ಮಾತ್ರ ಇಂತಹ ದುಶ್ಚಟಗಳ ದಾಸರಾಗದೆ, ಜೀವನದಲ್ಲಿ ಏನಾದರೂ ಸಾಧಿಸಲು ಸಾಧ್ಯವಾಗುತ್ತದೆ' ಎಂದು ಹೇಳಿದರು.

'ಮದ್ಯವ್ಯಸನ ಅಥವಾ ದುಶ್ಚಟಗಳಿಗೆ ಹೆಣ್ಣುಮಕ್ಕಳಿಗಿಂತ ಗಂಡು ಮಕ್ಕಳೇ



ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಹಾಗೂ ಗಾಂಧಿ ಸ್ಮಾರಕ ನಿಧಿಯ ಆಶ್ರಯದಲ್ಲಿ ನಗರದ ಗಾಂಧಿ ಭವನದಲ್ಲಿ ಈಚೆಗೆ ನಡೆದ 'ವಿಶ್ವ ಮಾದಕ ವಸ್ತು ವಿರೋಧಿ ದಿನದ ಅಂಗವಾಗಿ ಯುವಜನರಿಗೆ ಮಾರ್ಗದರ್ಶನ' ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೋ.ಶ್ರೀನಿವಾಸಯ್ಯ ಅವರು ವಿದ್ಯಾರ್ಥಿನಿಯರೊಂದಿಗೆ ಸಂವಾದ ನಡೆಸಿದರು. ಗಾಂಧಿವಾದಿ ನರಸಿಂಹಯ್ಯ, ಮನೋವೈದ್ಯ ಡಾ.ಸಿ.ಆರ್. ಚಂದ್ರಶೇಖರ್, ಶೇಷಾದ್ರಿಪುರ ದತ್ತಿನಿಧಿ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಮತ್ತಿತರರು ಚಿತ್ರದಲ್ಲಿದ್ದಾರೆ -ಪ್ರಜಾವಾಣಿ ಚಿತ್ರ

ಹೆಚ್ಚಿನ ಸಂಖ್ಯೆಯಲ್ಲಿ ಅಂಟಿಕೊಳ್ಳುತ್ತಾರೆ. ಪಾಶ್ಚಿಮಾತ್ಯ ದೇಶಗಳಿಗೆ ಹೋಲಿಸಿದರೆ, ನಮ್ಮ ದೇಶದಲ್ಲಿ ಮಾದಕ ವ್ಯವಸನಿಗಳ ಸಂಖ್ಯೆ ಕಡಿಮೆಯಿದೆ. ಯುವಜನತೆಯು ನಮ್ಮ ದೇಶದ ಮಹಾನ್ ನಾಯಕರಾದ ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧೀಜಿ ಅವರನ್ನು ಆದರ್ಶವಾಗಿ ಸ್ವೀಕರಿಸಿ, ಅವರ ದಾರಿಯಲ್ಲಿ ನಡೆಯಬೇಕು' ಎಂದರು.

'ಇಂದಿನ ಆಧುನಿಕ ಯುಗದಲ್ಲಿ ವೈಜ್ಞಾನಿಕ ತಂತ್ರಜ್ಞಾನ ಸಾಕಷ್ಟು ಅಭಿವೃದ್ಧಿಯಾಗಿದೆ. ಆದರೆ, ತಂತ್ರಜ್ಞಾನವನ್ನು ನಾವು ಬಳಸಿಕೊಳ್ಳುವುದರ ಮೇಲೆ ಅದರ ಒಳಿತು, ಕೆಡುಕು ತಿಳಿಯುತ್ತದೆ. ಯಾವುದನ್ನೇ ಆಗಲಿ ಒಳ್ಳೆಯ ರೀತಿಯಿಂದ ಬಳಸಿಕೊಂಡರೆ ಅನುಕೂಲವೇ ಆಗುತ್ತದೆ' ಎಂದು ಹೇಳಿದರು.

ಮನೋವೈದ್ಯ ಡಾ.ಸಿ.ಆರ್.ಚಂದ್ರಶೇಖರ್ ವಿಶೇಷ ಉಪನ್ಯಾಸ ನೀಡಿ, 'ಆ ಕ್ಷಣದ ರೋಮಾಂಚನವನ್ನು ಹೊಂದಲು ಇಂದಿನ ಯುವಕರು ವ್ಯಸನಗಳ ದಾಸರಾಗುತ್ತಿದ್ದಾರೆ. ಈಗ ಎಲ್ಲ ಮಾದಕ ವಸ್ತುಗಳು ಕಾಲೇಜು ಕ್ಯಾಂಪಸ್‌ನಲ್ಲಿಯೇ ದೊರೆಯುತ್ತಿರುವುದು ಆತಂಕಕಾರಿ ವಿಷಯವಾಗಿದೆ' ಎಂದರು.

'ಇಂದಿನ ಯುವಜನತೆ ತಮ್ಮ ಮಾನಸಿಕ ಒತ್ತಡದಿಂದ ಪಾರಾಗಲು ಸುಲಭ ಮಾರ್ಗವಾದ ದುಶ್ಚಟಗಳ ದಾಸರಾಗುತ್ತಿದ್ದಾರೆ. ಆದರೆ, ವ್ಯಸನಗಳ ದೀರ್ಘಕಾಲದ ಪರಿಣಾಮದದ ಬಗ್ಗೆ ಆಲೋಚಿಸುವುದಿಲ್ಲ' ಎಂದು ಹೇಳಿದರು.

ಶೇಷಾದ್ರಿಪುರ ದತ್ತಿನಿಧಿ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ ಮಾತನಾಡಿ, 'ಯುವಕರು ಒಳ್ಳೆಯ ಸಹವಾಸ ಮತ್ತು ಉತ್ತಮ ಸಾಹಿತ್ಯದ ಓದು ರೂಢಿಸಿಕೊಳ್ಳಬೇಕು. ವ್ಯಸನಗಳು ವ್ಯಕ್ತಿತ್ವವನ್ನೇ ನಾಶ ಮಾಡುತ್ತವೆ. ಇದರಿಂದ, ಮನಸ್ಸನ್ನು ನಿಯಂತ್ರಿಸಿ ದುಶ್ಚಟಗಳಿಂದ ದೂರವಿದ್ದು, ಉಜ್ವಲ ಭವಿಷ್ಯವನ್ನು ಕಟ್ಟಿಕೊಳ್ಳಬೇಕು' ಎಂದು ಕಿವಿಮಾತು ಹೇಳಿದರು.

ಉದಯವಾಣಿ

ಗುರುವಾರ | ಜೂನ್ | 27 | 2013

## ಮಾರ್ಗದರ್ಶನ

ಗಾಂಧಿಭವನದಲ್ಲಿ ವಿಶ್ವ ಮಾದಕ ವಸ್ತು ವಿರೋಧಿ ದಿನದ ಅಂಗವಾಗಿ ಹಮ್ಮಿಕೊಂಡಿದ್ದ ಮಾರ್ಗದರ್ಶನ ಕಾರ್ಯಕ್ರಮವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಧಾನ ಕಾರ್ಯದರ್ಶಿ ಬಸವರಾಜು ಉದ್ಘಾಟಿಸಿದರು. ಡಾ.ಚಂದ್ರಶೇಖರ್, ವುಡೇ ಪಿ.ಕೃಷ್ಣ ಇತರರು ಇದ್ದರು.



ಸಂಯುಕ್ತ ಕರ್ನಾಟಕ

ಜೂನ್ | 27 | 2013

# 'ಪುರುಷರ ದುಶ್ಚಟ ಸ್ತ್ರೀಯರಿಂದ ದೂರ ಸಾಧ್ಯ'

ಬೆಂಗಳೂರು, ಜೂ. 26: ಪುರುಷರನ್ನು ದುಶ್ಚಟಗಳಿಂದ ಮುಕ್ತಗೊಳಿಸಲು ಮಹಿಳೆಯರಿಂದ ಮಾತ್ರ ಸಾಧ್ಯ ಎಂದು ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಕಾರ್ಯದರ್ಶಿ ಬಸವರಾಜು ಹೇಳಿದರು.

ನಗರದ ಗಾಂಧಿಭವನದಲ್ಲಿ ವಿಶ್ವ ಮಾದಕ ವಸ್ತು ವಿರೋಧಿ ದಿನದ ಅಂಗವಾಗಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಹಾಗೂ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ 'ಯುವಜನರಿಗೆ ಮಾರ್ಗದರ್ಶನ' ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಇಂದಿನ ಯುವಕರ ಮೇಲೆ ಗಾಂಧಿ, ಬುದ್ಧ ಹಾಗೂ ಬಸವಣ್ಣನಂತಹ ಮಹಾನ್ ಪುರುಷರ ಹಿತವಚನಗಳು ರೋಮಾಂಚನಗೊಳಿಸುತ್ತಿದ್ದರೆ, ಇನ್ನೊಂದೆಡೆ ಮಾದಕ ವಸ್ತುಗಳು ಆಕರ್ಷಣೆ ಅಷ್ಟೇ ಪ್ರಮಾಣದಲ್ಲಿ ದಿಕ್ಕನ್ನು ಬದಲಾಯಿಸುತ್ತಿದೆ ಎಂದರು.

ಭಾರತವು ಸುಭದ್ರ ಸಂಸ್ಕೃತಿಯುಳ್ಳ ರಾಷ್ಟ್ರವಾಗಿದ್ದು, ಅನಾದಿಕಾಲದಿಂದಲೂ ಆಧ್ಯಾತ್ಮಿಕ ಜ್ಞಾನದ ಜೊತೆ ಸಾಂಪ್ರದಾಯಕ ನಡವಳಿಕೆಗಳನ್ನು ನೀಡುತ್ತ ಬಂದಿದೆ. ಆದರೆ ಇಂದಿನ ಯುವಜನತೆ ತಮ್ಮ ಮಾರ್ಗವನ್ನು ಬದಲಾಯಿಸುತ್ತಿದ್ದು, ಅವರನ್ನು ಸರಿದಾರಿಗೆ ತರುವಲ್ಲಿ ಇಂತಹ ಕಾರ್ಯಕ್ರಮಗಳು ಸೂಕ್ತ. ಚಂಚಲ ಸ್ವಭಾವದ ಮನಸ್ಸನ್ನು ಸೀಮಿತದಲ್ಲಿ ಇಟ್ಟುಕೊಳ್ಳುವ ಪ್ರಯತ್ನದತ್ತ ಯುವಜನಾಂಗ ಮುನ್ನುಗ್ಗಬೇಕು ಹಾಗೂ ಸುತ್ತಲಿನ ಪರಿಸರದ ಪ್ರಭಾವಕ್ಕೆ ಒಳಗಾಗದೆ ಮಾನಸಿಕವಾಗಿ ಬಲವಾಗಿರಬೇಕು ಎಂದರು.ಶೇಷಾದ್ರಿಪುರಂ ದತ್ತಿ ನಿಧಿ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ ಪ್ರಾಸ್ತಾವಿಕ ನುಡಿಗಳಲ್ಲಿ, ಉತ್ತಮ ಸಾಹಿತ್ಯ ಹಾಗೂ ಸಜ್ಜನರ ಸಹವಾಸಗಳಿಂದ ಯುವಜನತೆ ಮಾದಕ ವಸ್ತುಗಳಿಂದ ದೂರ ಉಳಿಯಬಹುದು. ಮದ್ಯಪಾನವನ್ನು ಸಂಪೂರ್ಣ ನಿಷೇಧಿಸುವುದು ಗಾಂಧಿವಾದವಾಗಿತ್ತು, ಆ ನಿಟ್ಟಿನಲ್ಲಿ ಮುನ್ನಡೆಯಬೇಕೆಂದು ತಿಳಿಸಿದರು.

ಖ್ಯಾತ ಮನೋವೈದ್ಯರು ಹಾಗೂ ಪ್ರಾಧ್ಯಾಪಕ ಡಾ. ಸಿ.ಆರ್. ಚಂದ್ರಶೇಖರ್, ಮಾದಕ ವಸ್ತುಗಳಿಂದ ಆಗುವ ಪರಿಣಾಮ ಹಾಗೂ ನಿವಾರಣೆಯ ಕ್ರಮಗಳ ಬಗ್ಗೆ ಉಪನ್ಯಾಸ ನೀಡಿದರು. ಎನ್‌ಎಸ್‌ಎಸ್ ರಾಜ್ಯ ಸಂಪರ್ಕಾಧಿಕಾರಿ ಡಾ. ಕೆ.ಬಿ. ಧನಂಜಯ ಮಾದಕ ವಸ್ತುಗಳನ್ನು ಸೇವನೆ ಮಾಡುವುದಿಲ್ಲ ಎಂಬ ಪ್ರತಿಜ್ಞಾವಿಧಿ ಬೋಧಿಸಿದರು.

ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಹೆಚ್.ಬಿ. ದಿನೇಶ್, ಗಾಂಧಿ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಪೊ. ಜಿ.ಬಿ. ಶಿವರಾಜು, ಶೇಷಾದ್ರಿಪುರಂ ಕಾಲೇಜು ಎನ್.ಎಸ್.ಎಸ್. ಅಧಿಕಾರಿ ಪ್ರತಾಪ್ ಲಿಂಗಯ್ಯ, ಬಿ.ಇ.ಎಸ್. ಕಾಲೇಜು ಪ್ರಾಂಶುಪಾಲ ಎಂ. ರಂಗರಾಜು ಮತ್ತಿತರರು ಉಪಸ್ಥಿತರಿದ್ದರು.




ನಗರದ ಗಾಂಧಿಭವನದಲ್ಲಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಹಾಗೂ ಗಾಂಧಿ ಸ್ಮಾರಕ ನಿಧಿ ವಿಶ್ವ ಮಾದಕ ವಸ್ತು ವಿರೋಧಿ ದಿನದ ಅಂಗವಾಗಿ ಆಯೋಜಿಸಿದ ಕಾರ್ಯಕ್ರಮದಲ್ಲಿ ರಾಷ್ಟ್ರೀಯ ಸೇವಾ ಯೋಜನೆ ಕಾರ್ಯಕರ್ತರು ಮಾದಕ ವಸ್ತುಗಳ ಸೇವನೆಯಿಂದ ಆಗುವ ಹಾನಿಯ ಬಗ್ಗೆ ಜಾಗೃತಿ ಮೂಡಿಸುವ ಮೆರವಣಿಗೆ ಚಾಲನೆ ನೀಡಿದ ಸಂದರ್ಭದಲ್ಲಿ ಹೋ. ಶ್ರೀನಿವಾಸಯ್ಯ, ಡಾ. ಸಿ.ಆರ್. ಚಂದ್ರಶೇಖರ್, ಡಾ. ವೂಡೆ ಪಿ. ಕೃಷ್ಣ, ವಿಶುಕುಮಾರ್, ಎಚ್.ಬಿ. ದಿನೇಶ್ ಮುಂತಾದವರು ಉಪಸ್ಥಿತರಿದ್ದರು.

# ಮನಸು ಹತೋಟಿಯಲ್ಲಿದ್ದರೆ ಮಾದಕ ವ್ಯಸನದಿಂದ ದೂರ

## ದೇಶದಲ್ಲಿ ಮಾದಕ ವಸ್ತು ಸೇವನೆಯಿಂದ ಪ್ರತಿವರ್ಷ ಶೇ.15ರಷ್ಟು ಜನರ ಮರಣ: ಬಸವರಾಜು

ಬೆಂಗಳೂರು: ನಿಮ್ಮ ಮನಸನ್ನು ಹತೋಟಿಯಲ್ಲಿ ಇಟ್ಟುಕೊಂಡರೆ, ಮಾದಕ ವಸ್ತುಗಳ ವ್ಯಸನಿಯಾಗುವುದು ತಪ್ಪುತ್ತದೆ ಎಂದು ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ಹಾಗೂ ಕನ್ನಡ ಸಂಸ್ಕೃತಿ ಇಲಾಖೆ ಪ್ರಧಾನ ಕಾರ್ಯದರ್ಶಿ ಬಸವರಾಜು ಹೇಳಿದರು.

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಬುಧವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ ವಿಶ್ವ ಮಾದಕ ವಸ್ತು ವಿರೋಧಿ ದಿನ ಅಂಗವಾಗಿ ಯುವಜನರಿಗೆ ಮಾರ್ಗದರ್ಶನ ಕಾರ್ಯಕ್ರಮದಲ್ಲಿ ಮಾತನಾಡಿದರು.

ಇಂದು ಸಾಕಷ್ಟು ಯುವಜನರು ಮಾದಕ ವಸ್ತುಗಳಿಗೆ ಬಲಿಯಾಗುತ್ತಿದ್ದಾರೆ. ಪ್ರತಿ ವರ್ಷ ಮಾದಕ ವಸ್ತು ಸೇವನೆಯಿಂದ ಶೇ.15ರಷ್ಟು ಜನರು ಮರಣ ಹೊಂದುತ್ತಿದ್ದಾರೆ. ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಹೋಲಿಕೆ ಮಾಡಿದರೆ, ನಮ್ಮ ದೇಶದಲ್ಲಿ ಹೆಣ್ಣು ಮಕ್ಕಳಿಗಿಂತ ಮಾದಕ ವಸ್ತು ಸೇವನೆಯಲ್ಲಿ ತೊಡಗಿರುವವರು ಗಂಡಸರೇ ಆಗಿದ್ದಾರೆ. ಹೀಗಾಗಿ ಮಾದಕ ವಸ್ತುಗಳ ಸೇವನೆಯಿಂದ ಉಂಟಾಗುವ ದುಷ್ಪರಿಣಾಮಗಳ ಬಗ್ಗೆ ಪ್ರತಿಯೊಬ್ಬರು ಅರಿತು ನಿಮ್ಮ ಸ್ನೇಹಿತರಿಗೂ ಮಾದಕ ವಸ್ತು ಸೇವನೆ ಮಾಡುವುದು ತಪ್ಪು ಎಂಬ ಬಗ್ಗೆ ತಿಳಿಹೇಳಬೇಕು ಎಂದರು.

ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಹೋಲಿಕೆ ಮಾಡಿದರೆ, ನಮ್ಮ ರಾಷ್ಟ್ರದಲ್ಲಿ ಮಾದಕ ವ್ಯಸನಿಗಳ ಸಂಖ್ಯೆ ಕಡಿಮೆ ಇದೆ.



ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಆಯೋಜಿಸಿದ್ದ ವಿಶ್ವ ಮಾದಕ ವಸ್ತು ವಿರೋಧಿ ದಿನ ಅಂಗವಾಗಿ ಯುವಜನರಿಗೆ ಮಾರ್ಗದರ್ಶನ ಕಾರ್ಯಕ್ರಮದಲ್ಲಿ ಮಾದಕ ವಸ್ತು ಸೇವಿಸದಂತೆ ಯುವಕರಿಂದ ಪ್ರತಿಜ್ಞೆ ಸ್ವೀಕರಿಸಿದರು. ಕನ್ನಡ ಸಂಸ್ಕೃತಿ ಇಲಾಖೆ ಪ್ರಧಾನ ಕಾರ್ಯದರ್ಶಿ ಬಸವರಾಜು, ಗಾಂಧಿ ಸ್ಮಾರಕ ನಿಧಿ ಡಾ.ಹೋ.ಶ್ರೀನಿವಾಸಯ್ಯ, ಎಚ್.ಬಿ.ದಿನೇಶ್, ಮನೋವೈದ್ಯ ಡಾ.ಸಿ.ಆರ್. ಚಂದ್ರಶೇಖರ್ ಇದ್ದರು.

ಇದಕ್ಕೆ ಕಾರಣ, ನಮ್ಮ ಸಂಸ್ಕೃತಿ ಮತ್ತು ಪರಂಪರೆ. ಮಹಾತ್ಮ ಗಾಂಧಿ, ವಿವೇಕಾನಂದರಂತಹ ಸಾಕಷ್ಟು ಮಹಾನ್ ವ್ಯಕ್ತಿಗಳು ನಮ್ಮ ದೇಶದಲ್ಲಿ ಜನ್ಮ ತಾಳಿದ್ದಾರೆ. ಅವರ ತತ್ವ ಆದರ್ಶಗಳನ್ನು ನಾವು ಅಳವಡಿಸಿಕೊಂಡು ಕೆಟ್ಟ ಚಟಗಳಿಂದ ದೂರ ಇರಬೇಕು ಎಂದರು.

**ಹಸನಾಗಲು ವ್ಯಸನ ಬಿಡಿ:** ಶೇಷಾದ್ರಿಪುರ ದತ್ತಿ ನಿಧಿ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಗಾಂಧಿ ಅವರು ದೇಶದ ಪುನರ್ ನಿರ್ಮಾಣಕ್ಕೆ ಶ್ರಮಿಸಿದರು. ಪಾನ ನಿಷೇಧ ಮಾಡಬೇಕು ಎಂದು ಹೋರಾಟ ನಡೆಸಿದರು. ಆದರೆ, ಇಂದು ಇದು ಪೂರ್ಣ ಪ್ರಮಾಣದಲ್ಲಿ ಸಾಧ್ಯವಾಗಿಲ್ಲ. ನಿಮ್ಮ ಬಾಳು ಹಸನಾಗಲು ವ್ಯಸನದಿಂದ ದೂರ ಇರಿ ಎಂದು ಸಲಹೆ ನೀಡಿದರು.

ಕುಡಿತ ಮತ್ತು ಮಾದಕ ವಸ್ತುಗಳು ದೊಡ್ಡ ಕಾಯಿಲೆಗಿಂತ ಕೆಟ್ಟವು ಇವು ಮನುಷ್ಯನನ್ನು ಮಾನಸಿಕವಾಗಿ ಹಾಗೂ ದೈಹಿಕವಾಗಿ ದುರ್ಬಲಗೊಳಿಸುತ್ತವೆ. ಇಂತಹ ವ್ಯಸನಗಳಿಂದ ದೂರ ಉಳಿಯುವುದೇ ಒಳ್ಳೆಯದು ಎಂದರು.

ಈ ಸಮಾರಂಭದಲ್ಲಿ ಕಾಲೇಜು ವಿದ್ಯಾರ್ಥಿಗಳಿಂದ ದುಷ್ಚಟಗಳಿಗೆ ಬಲಿಯಾಗುವುದಿಲ್ಲ ಎಂದು ಪ್ರತಿಜ್ಞೆ ಸ್ವೀಕರಿಸಲಾಯಿತು.

ಮನೋವೈದ್ಯ ಡಾ.ಸಿ.ಆರ್. ಚಂದ್ರಶೇಖರ್, ಗಾಂಧಿ ಸ್ಮಾರಕ ನಿಧಿ ಡಾ.ಹೋ. ಶ್ರೀನಿವಾಸಯ್ಯ, ಎಚ್.ಬಿ. ದಿನೇಶ್, ಪ್ರೊ.ಜೆ.ಬಿ. ಶಿವರಾಜು, ಪ್ರತಾಪ್ ಲಿಂಗಯ್ಯ, ಡಾ.ಕೆ.ಬಿ. ಧನಂಜಯ, ರಂಗರಾಜು ಭಾಗವಹಿಸಿದ್ದರು.

# 'ಗ್ರಾಮೀಣಾಭಿವೃದ್ಧಿ ಇಲಾಖೆಗೆ ಸಾಮಾಜಿಕ ತಪಾಸಣೆ ಅಗತ್ಯ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಗ್ರಾಮೀಣಾಭಿವೃದ್ಧಿ ಇಲಾಖೆಯಲ್ಲಿ ಅನುಷ್ಠಾನಗೊಳ್ಳುವ ಕಾರ್ಯಕ್ರಮಗಳ ಕುರಿತು ಲೋಕಾಯುಕ್ತ ಮಾದರಿಯಲ್ಲಿ ಸಾಮಾಜಿಕ ತಪಾಸಣೆ ಮಾಡುವಂತೆ ಹಿರಿಯ ಗಾಂಧಿ ಅನುಯಾಯಿಗಳಿಗೆ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್ ಅವರು ಮನವಿ ಮಾಡಿದರು.

ಕರ್ನಾಟಕ ಗಾಂಧಿ ಸ್ಮಾರಕನಿಧಿ ಹಾಗೂ ಹಾವೇರಿಯ ಹುತಾತ್ಮ ಮೈಲಾರ ಮಹಾದೇವಪ್ಪ ರಾಷ್ಟ್ರೀಯ ಸ್ಮಾರಕ ಟ್ರಸ್ಟ್‌ನ ಸಹಯೋಗದಲ್ಲಿ ಏರ್ಪಡಿಸಿದ್ದ ಮೈಲಾರ ಮಹಾದೇವಪ್ಪ ದತ್ತಿ ಕಾರ್ಯಕ್ರಮದಲ್ಲಿ ಮಾತನಾಡಿದರು.

'ಗಾಂಧೀಜಿ ಅವರ ಕನಸಿನ ರಾಮರಾಜ್ಯವನ್ನು ಹಳ್ಳಿಗಳಲ್ಲಿ ನನಸಾಗಿಸಲು ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡಲು ಗಾಂಧಿವಾದಿಗಳು ಒಂದು ಸಮಿತಿಯನ್ನು ಮಾಡಿಕೊಳ್ಳಬೇಕು. ಅದರ ಮುಖ್ಯಸ್ಥರಾಗಿ ನಾಡೋಜ ಡಾ.ಪಾಟೀಲ ಪುಟ್ಟಪ್ಪ, ವಿಧಾನಸಭೆಯ ಮಾಜಿ ಸಭಾಧ್ಯಕ್ಷ ಬಿ.ಜಿ.ಬಣಕಾರ್ ಹಾಗೂ ಗಾಂಧಿ ಸ್ಮಾರಕನಿಧಿಯ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ಅವರು ಇರಬೇಕು' ಎಂದರು.

'ಗ್ರಾಮ ಪಂಚಾಯಿತಿ ವ್ಯವಸ್ಥೆಯನ್ನು ಬಲಗೊಳಿಸಿ, ಸದಸ್ಯರಲ್ಲಿ ನೈತಿಕ ಧೈರ್ಯವನ್ನು ತುಂಬಬೇಕಿದೆ. ಈ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಆಗಿರುವ ಲೋಪದೋಷಗಳ ಬಗ್ಗೆ ಹಾಗೂ ನಾನು ತೆಗೆದುಕೊಳ್ಳುವ ನಿರ್ಧಾರಗಳ ಬಗ್ಗೆ ನಿಗಾವಹಿಸಿ ಇಲಾಖೆಯ ಗಮನಕ್ಕೆ ತರಬೇಕು. ಮೂರು ತಿಂಗಳಿಗೊಮ್ಮೆ ಇಲಾಖೆಯ ಅಧಿಕಾರಿಗಳ ಸಭೆ ಕರೆದು ಅವರಿಗೆ ಸಲಹೆಗಳನ್ನು ನೀಡಬೇಕು' ಎಂದು ಮನವಿ ಮಾಡಿದರು.



ನಗದರಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಹಾಗೂ ವಿಧಾನ ಸಭೆಯ ಮಾಜಿ ಸಭಾಧ್ಯಕ್ಷ ಬಿ.ಜಿ.ಬಣಕಾರ್ ಆವರು ಮೈಲಾರ ಮಹದೇವ್ ಮತ್ತು ಇತರ ಸ್ವಾತಂತ್ರ್ಯ ಹೋರಾಟಗಾರರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು. ಡಾ.ಪಾಟೀಲ ಪುಟ್ಟಪ್ಪ, ಮೈಲಾರಪ್ಪ ಆವರ ಪುತ್ರಿ ಕಸ್ತೂರಿ ಚಿತ್ರದಲ್ಲಿದ್ದಾರೆ -ಪ್ರಜಾವಾಣಿ ಚಿತ್ರ

ಮೈಲಾರ ಮಹಾದೇವಪ್ಪ ಟ್ರಸ್ಟ್ ಆಧುನಿಕ ಸಂಪರ್ಕ ಮಾಧ್ಯಮಗಳನ್ನು ಬಳಸಿ, ಮಹಾದೇವಪ್ಪ ಅವರ ಮಾಹಿತಿಯನ್ನು ಪ್ರಕಟಿಸಬೇಕು ಎಂದು ಸಲಹೆ ನೀಡಿದರು.

ಅಕ್ಟೋಬರ್ 2ರ ಒಳಗಾಗಿ ಬೆಂಗಳೂರಿನಲ್ಲಿ ಗಾಂಧಿ ವಸ್ತುಸಂಗ್ರಹಾಲಯದ ಸ್ಥಾಪನೆ ಬಗ್ಗೆ ಪ್ರಾರಂಭಿಕ ಹಂತದ ಕೆಲಸಗಳನ್ನು ಆರಂಭಿಸಲು ಅದರ ರೂಪುರೇಷೆಗಳನ್ನು ತಯಾರಿಸಲಾಗುವುದು. ಹಾಗೂ ಗಾಂಧಿ ಸ್ಮಾರಕನಿಧಿಗೆ ಹೆಚ್ಚಿನ ಅನುದಾನ ನೀಡುವ ಬಗ್ಗೆ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರೊಂದಿಗೆ ಚರ್ಚೆ ನಡೆಸಲಾಗುವುದು ಎಂದು ಭರವಸೆ ನೀಡಿದರು.

ಡಾ.ಪಾಟೀಲ ಪುಟ್ಟಪ್ಪ ಅವರು ಮಾತನಾಡಿ, ವಿಧಾನ ಸಭೆಯ ಮಾಜಿ ಸಭಾಧ್ಯಕ್ಷ ಬಿ.ಜಿ.ಬಣಕಾರ್ ಅವರು ರಾಜಕಾರಣದಿಂದ ಶಾಶ್ವತವಾಗಿ ಹೊರ ಬರಬೇಕು. ಬೇರೆಯವರಿಂದ ಅಪೇಕ್ಷೆ ಮಾಡುವವರ ಧ್ವನಿ ಸದಾ ಕುಗ್ಗುತ್ತದೆ. ಹೀಗಾಗಿ ರಾಜಕೀಯ ಪಕ್ಷಗಳಿಂದ ಅಪೇಕ್ಷೆ ಮಾಡುವ ಬದಲು ಬೇರೆಯವರಿಗೆ ಕೊಡುವ ಸ್ಥಿತಿಗೆ ಅವರು ಬರಬೇಕು ಎಂದು ಸಲಹೆ ನೀಡಿದರು.

ಹುತಾತ್ಮ ಮೈಲಾರ ಮಹಾದೇವಪ್ಪ ಅವರ ಹೋರಾಟದ ಬದುಕಿನ ಕುರಿತು ಸಂಕಮ್ಮ ಜಿ. ಸಂಕಣ್ಣ ಅವರು ರಚಿಸಿರುವ 'ಹೋರಾಟದ ಒಂದು ನೋಟ' ಪುಸ್ತಕವನ್ನು ಬಿಡುಗಡೆ ಮಾಡಿದ ಸಾಹಿತಿ ಪ್ರೊ. ಎಸ್.ಜಿ. ಸಿದ್ದರಾಮಯ್ಯ ಅವರು, ಕಳೆದು ಹೋದ ಜೀವನದ ಮೌಲ್ಯಗಳನ್ನು ಪುನಶ್ಚೇತನಗೊಳಿಸುವಲ್ಲಿ ಈ ಕಥನ ಸಹಕಾರಿಯಾಗಿದೆ. ಹೀಗಾಗಿ ಪ್ರತಿಯೊಂದು ಯುವ ಮನಸ್ಸು ಇದನ್ನು ಓದಲೇಬೇಕು ಎಂದು ಹೇಳಿದರು.

ಹಾವೇರಿಯ ಜಿಲ್ಲಾಧಿಕಾರಿ ಪಾಂಡುರಂಗ ನಾಯಕ್, ಲೇಖಕಿ ಸಂಕಮ್ಮ ಜಿ. ಸಂಕಣ್ಣ, ವಿಧಾನ ಸಭೆಯ ಮಾಜಿ ಸಭಾಧ್ಯಕ್ಷ ಬಿ.ಜಿ.ಬಣಕಾರ್, ಕರ್ನಾಟಕ ಗಾಂಧಿ ಸ್ಮಾರಕನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾ

### 'ಮೈಸೂರಿಗಷ್ಟೇ ಮುಖ್ಯಮಂತ್ರಿ ಅಲ್ಲ'

ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಬೆಂಗಳೂರು ಮತ್ತು ಮೈಸೂರನ್ನು ಮಾತ್ರ ಕರ್ನಾಟಕ ಎಂದು ಭಾವಿಸಿದಂತೆ ಕಾಣುತ್ತಿದೆ. ಅವರು ಉತ್ತರ ಕರ್ನಾಟಕದ ಜಿಲ್ಲೆಗಳತ್ತ ತಿರುಗಿಯೂ ನೋಡುತ್ತಿಲ್ಲ ಎಂದು ಪಾಟೀಲ ಪುಟ್ಟಪ್ಪ ಅಸಮಾಧಾನ ವ್ಯಕ್ತಪಡಿಸಿದರು.

ಮುಖ್ಯಮಂತ್ರಿಗಳು ವಿಜಾಪುರ, ಬೆಳಗಾವಿ, ಹುಬ್ಬಳ್ಳಿ ಹಾಗೂ ಧಾರವಾಡಗಳಿಗೆ ಭೇಟಿ ನೀಡಿ ಅಲ್ಲಿನ ಜನರ ಸಮಸ್ಯೆಗಳನ್ನು ಅರಿಯಬೇಕು ಎಂದು ಅವರು ಅಭಿಪ್ರಾಯಪಟ್ಟರು.

ಸಂಯುಕ್ತ ಕರ್ನಾಟಕ ಜೂನ್ | 19 | 2013

# ವಿದ್ಯಾರ್ಥಿಗಳಿಗೆ ನಿರ್ದಿಷ್ಟ ಗುರಿ ಅಗತ್ಯ

**ಬೆಂಗಳೂರು, ಜೂ. 18:** ಹದಿಹರೆಯದ ಚಂಚಲ ಮನಸನ್ನು ನಿಯಂತ್ರಣದಲ್ಲಿ ಇಟ್ಟುಕೊಂಡರೆ ಮಾತ್ರ ಸಾಧನೆ ಮಾಡಲು ಸಾಧ್ಯ ಎಂದು ಭಾರತೀಯ ವೈಮಾನಿಕ ವಿಜ್ಞಾನ ಸಂಸ್ಥೆಯ ಪ್ರಾಧ್ಯಾಪಕರಾದ ಡಾ. ಜಿ. ಜಗದೀಶ್ ಹೇಳಿದರು.

ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ಪ್ರತಿಭಾ ಪುರಸ್ಕಾರ ಹಾಗೂ ಶೈಕ್ಷಣಿಕ ಪುನಶ್ಚೇತನ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ವಿದ್ಯಾರ್ಥಿಗಳು ಪ್ರಾಮಾಣಿಕವಾಗಿ ಬದುಕಿ ಜೀವನದಲ್ಲಿ ನಿರ್ದಿಷ್ಟ ಗುರಿಯನ್ನು ಇಟ್ಟುಕೊಂಡು ಮುಂದೆ ಸಾಗಬೇಕು. ವಿದ್ಯಾರ್ಥಿದಿಸೆಯಲ್ಲಿ ಇದ್ದಾಗಲೇ ಜೀವನದಲ್ಲಿ ಆದರ್ಶಗಳನ್ನು ಬೆಳೆಸಿಕೊಂಡರೆ ಮುಂದೆ ಯಶಸ್ವಿಯಾಗಲು ಸಾಧ್ಯ ಎಂದು ಕಿವಿ ಮಾತು ಹೇಳಿದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡಿ ವಿದ್ಯಾರ್ಥಿಗಳು ವಿವೇಕಾನಂದ, ಗಾಂಧೀಜಿಯವರ ಆದರ್ಶಗಳನ್ನು ಮೈಗೂಡಿಸಿಕೊಂಡು ಬದುಕಬೇಕು. ತಂದೆತಾಯಿಗೆ ಹೆಸರು ತರುವಂತೆ ಸಾಧನೆ ಮಾಡಬೇಕೆಂದು ತಿಳಿಸಿದರು. ಅಧ್ಯಕ್ಷತೆ ವಹಿಸಿದ್ದ ಎನ್. ಆರ್. ಪಂಡಿತಾರಾಧ್ಯ ಮಾತನಾಡಿ ಶಿಕ್ಷಕರು ಮತ್ತು ಪೋಷಕರು ವಿದ್ಯಾರ್ಥಿಗಳಿಗೆ ನಾಡಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಂತೆ ತಿಳಿ ಹೇಳಬೇಕು ಎಂದು ಹೇಳಿದರು. ಧರ್ಮದರ್ಶಿಗಳಾದ ಕೆ. ಕೃಷ್ಣ, ಡಬ್ಲ್ಯೂ ಜಿ. ರಾಮಕೃಷ್ಣ ಅನಂತರಾಮು, ಖಜಾಂಚಿಗಳಾದ ಬಿ. ಎಮ್. ಪಾರ್ಥಸಾರಥಿ, ಜಂಟಿ ಕಾರ್ಯದರ್ಶಿ ಎ. ಆರ್. ಶ್ರೀನಿವಾಸಯ್ಯ, ಸಹಾಯಕ ಕಾರ್ಯದರ್ಶಿ ಸರೋಜ ನಂಜಪ್ಪ, ಪ್ರಾಂಶುಪಾಲ ಪ್ರೊ. ಸುರೇಶ್ ಮತ್ತಿತರರು ಉಪಸ್ಥಿತರಿದ್ದರು.



ನಗರದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ 'ಪ್ರತಿಭಾ ಪುರಸ್ಕಾರ ಹಾಗೂ ಶೈಕ್ಷಣಿಕ ಪುನಶ್ಚೇತನ' ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಭಾರತೀಯ ವೈಮಾನಿಕ ವಿಜ್ಞಾನ ಸಂಸ್ಥೆಯ ಪ್ರಾಧ್ಯಾಪಕರಾದ ಡಾ. ಜಿ ಜಗದೀಶ್ ಅವರನ್ನು ಸನ್ಮಾನಿಸಿದ ಸಂದರ್ಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ. ಪಿ.ಕೃಷ್ಣ, ಉಪಾಧ್ಯಕ್ಷ ಡಬ್ಲ್ಯು ಎಚ್ ಅನಿಲಕುಮಾರ್, ಸಹಾಯಕ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಖಜಾಂಚಿ ಬಿ.ಎಂ. ಪಾರ್ಥಸಾರಥಿ, ಪ್ರಾಂಶುಪಾಲ ಪ್ರೊ.ಎಸ್. ಸುರೇಶ್ ಮುಂತಾದವರು ಉಪಸ್ಥಿತರಿದ್ದರು.

ಉದಯವಾಣಿ ಬೆಂಗಳೂರು
ಶುಕ್ರವಾರ | ಜೂನ್ | 14 | 2013

# 'ರಕ್ತದಾನದಿಂದ ಹೃದಯ ಸಮಸ್ಯೆ ದೂರ'



ಬೆಂಗಳೂರು: ವರ್ಷಕ್ಕೆ ಕನಿಷ್ಠ 2 ಬಾರಿಯಾದರೂ ರಕ್ತದಾನ ಮಾಡುವುದರಿಂದ ದೇಹದಲ್ಲಿನ ಕೊಬ್ಬಿನ ಅಂಶ ಕಡಿಮೆಯಾಗಿ ಶೇ.80ರಷ್ಟು ಹೃದಯಾಘಾತ ಸಮಸ್ಯೆಯಿಂದ ದೂರಾಗಬಹುದು ಎಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ನಿರ್ದೇಶಕ ಡಾ. ಬಿ.ಎನ್. ಧನ್ಯಕುಮಾರ್ ಹೇಳಿದ್ದಾರೆ.

ಗುರುವಾರ ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘ ಏರ್ಪಡಿಸಿದ್ದ ರಕ್ತದಾನ ಶಿಬಿರ ಉದ್ಘಾಟಿಸಿ ಮಾತನಾಡಿದರು.

ನಿಯಮಾವಳಿಗಳ ಪ್ರಕಾರ 18 ವರ್ಷ ಮೇಲ್ಪಟ್ಟವರು ರಕ್ತದಾನ ಮಾಡಬಹುದು. ಆರೋಗ್ಯವಂತರಾಗಿದ್ದರೆ 16 ವರ್ಷಕ್ಕೇ ರಕ್ತದಾನ ಮಾಡಿದರೂ ಯಾವುದೇ ತೊಂದರೆ ಇಲ್ಲ. ಪ್ರತಿ ವ್ಯಕ್ತಿ ವರ್ಷಕ್ಕೆ 2 ಬಾರಿಯಾದರೂ ರಕ್ತದಾನ ಮಾಡುವುದರಿಂದ ದೇಹದಲ್ಲಿನ ಕೊಬ್ಬಿನಾಂಶ ಕಡಿಮೆಯಾಗುತ್ತದೆ. ಇದರಿಂದ ಶೇ.80ರಷ್ಟು ಹೃದಯಾಘಾತದ ಸಮಸ್ಯೆಗಳು ಉದ್ಭವಿಸುವುದಿಲ್ಲ ಎಂದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಟ್ರಸ್ಟ್‌ನ ಗೌರವ ಕಾರ್ಯದರ್ಶಿ ಡಾ. ವುಡೇ ಪಿ. ಕೃಷ್ಣ, ರಕ್ತದಾನದಿಂದ ಅನಾರೋಗ್ಯ ಉಂಟಾಗುತ್ತದೆ, ಸೌಂದರ್ಯ ಹಾಳಾಗುತ್ತದೆ ಎಂಬ ತಪ್ಪು ಕಲ್ಪನೆ ಜನರಲ್ಲಿದೆ. ಇದನ್ನು ಹೋಗಲಾಡಿಸಿ, ರಕ್ತದಾನದಿಂದ ಆರೋಗ್ಯ ವೃದ್ಧಿಸುತ್ತದೆ ಎಂಬುದನ್ನು ಮನವರಿಕೆ ಮಾಡಿಕೊಡಬೇಕಿದೆ ಎಂದರು.

ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್ ಮಾತನಾಡಿ, ಭಾರತದಲ್ಲಿ ಪ್ರತಿವರ್ಷ 56 ದಶಲಕ್ಷ ಯೂನಿಟ್ ರಕ್ತದ ಕೊರತೆ ಎದುರಾಗುತ್ತಿದೆ. ವೃತ್ತಿಪರ ರಕ್ತದಾನವನ್ನು ಸುಪ್ರೀಂ ಕೋರ್ಟ್ ನಿಷೇಧಿಸಿದ ನಂತರ ಭಾರತದಲ್ಲಿ ರಕ್ತದಾನಿಗಳ ಕೊರತೆ ತೀವ್ರವಾಗಿದೆ. ಹಾಗಾಗಿ ರಕ್ತದ ಕೊರತೆಯೂ ಹೆಚ್ಚಾಗಿದೆ ಎಂದರು.

ವಿಜ್ಞಾನ ಮುಂದುವರಿದಿದ್ದು, ಪರಮಾಣು ಕಂಡುಹಿಡಿದರೂ ರಕ್ತ ಉತ್ಪಾದನೆ ಮಾತ್ರ ಸಾಧ್ಯವಾಗಿಲ್ಲ. ರಕ್ತ ಉತ್ಪಾದಿಸುವ ಏಕೈಕ ಯಂತ್ರ ಮನುಷ್ಯನ ದೇಹ ಮಾತ್ರ ಎಂದರು. ಮನುಷ್ಯನ ದೇಹದಿಂದ ಹೊರತೆಗೆದ ರಕ್ತವನ್ನು ಸುಮಾರು 45 ದಿನಗಳ ವರೆಗೆ ಕೆಡದಂತೆ ಸಂರಕ್ಷಿಸುವ ತಂತ್ರಜ್ಞಾನ ಅಭಿವೃದ್ಧಿಪಡಿಸಲಾಗಿದೆ. ಅಲ್ಲದೆ ರಕ್ತದಲ್ಲಿ ಅಗತ್ಯವಿರುವ ಘಟಕಗಳನ್ನು ಬೇರ್ಪಡಿಸಿ 1 ವರ್ಷದವರೆಗೂ ಸಂರಕ್ಷಿಸಬಹುದು. ಹೀಗಾಗಿ ದಾನ ಮಾಡಿದ ರಕ್ತ ವ್ಯರ್ಥವಾಗುವುದಿಲ್ಲ ಎಂದರು.

ಶಿಬಿರದಲ್ಲಿ ಟ್ರಸ್ಟ್‌ನ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಕಾಲೇಜಿನ ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಪ್ರೀತಿ ಶ್ರೀನಿವಾಸನ್ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಶುಕ್ರವಾರ 14ನೇ ಜೂನ್ 2013

# ರಕ್ತದಾನಕ್ಕೆ ಸಲಹೆ

ಬೆಂಗಳೂರು: 'ರಕ್ತದಾನದಿಂದ ದೇಹ್ಲಾಪಕ ಶಕ್ತಿ ವೃದ್ಧಿಯಾಗುತ್ತದೆ. ರಕ್ತದಲ್ಲಿರುವ ಕೊಬ್ಬಿನ ಅಂಶ ಕಡಿಮೆ ಆಗುತ್ತದೆ' ಎಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ನಿರ್ದೇಶಕ ಡಾ.ಬಿ.ಎನ್.ಧನ್ಯ ಕುಮಾರ್ ತಿಳಿಸಿದರು.

ಕರ್ನಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟ, ಭಾರತ ಸ್ವಯಂ ರಕ್ತದಾನಿಗಳ ಒಕ್ಕೂಟ ಹಾಗೂ ಶೇಷಾದ್ರಿಪುರ ಸಮೂಹ ಸಂಸ್ಥೆಗಳ ಸಹಯೋಗದಲ್ಲಿ ಶೇಷಾದ್ರಿಪುರ ಕಾಲೇಜು ಆವರಣದಲ್ಲಿ ಗುರುವಾರ ಹಮ್ಮಿಕೊಂಡಿದ್ದ 'ವಿಶ್ವ ರಕ್ತದಾನಿಗಳ ದಿನಾಚರಣೆ'ಯಲ್ಲಿ ಅವರು ಮಾತನಾಡಿದರು.

ಕರ್ನಾಟಕ ಸ್ವಯಂ ರಕ್ತದಾನಿಗಳ ಒಕ್ಕೂಟದ ಅಧ್ಯಕ್ಷ ರಾಜು ಚಂದ್ರಶೇಖರ್ ಮಾತನಾಡಿ, 'ದೇಶದಲ್ಲಿ ಒಟ್ಟು 152 ದಶಲಕ್ಷ ಲೀಟರ್ ರಕ್ತಕ್ಕೆ ಬೇಡಿಕೆ ಇದೆ. 96 ಲಕ್ಷ ಲೀಟರ್ ರಕ್ತ ಸಂಗ್ರಹವಾಗುತ್ತಿದೆ ಎಂದರು.

ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್‌ ಡಾ. ವೂಡೆ ಪಿ.ಕೃಷ್ಣ ಮಾತನಾಡಿದರು.

ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್‌ನ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು.

ಸಂಯುಕ್ತ ಕರ್ನಾಟಕ | ಜೂನ್ | 14 | 2013

# ರಕ್ತದಾನಿಗಳ ಕೊರತೆ: ಕಳವಳ

ಬೆಂಗಳೂರು, ಜೂ 13; ಸುಪ್ರೀಂ ಕೋರ್ಟ್ ವೃತ್ತಿಪರ ರಕ್ತದಾನವನ್ನು ನಿಷೇಧಿಸಿದ ನಂತರ ದೇಶದಲ್ಲಿ ರಕ್ತದಾನಿಗಳ ಕೊರತೆ ಎದ್ದು ಕಾಣುತ್ತಿದೆ ಎಂದು ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್ ಕಳವಳ ವ್ಯಕ್ತಪಡಿಸಿದರು.

ಶೇಷಾದ್ರಿಪುರಂ ಕಾಲೇಜಿನಲ್ಲಿ ಸ್ವಯಂ ರಕ್ತದಾನಿಗಳ ಸಂಘದ ವತಿಯಿಂದ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ಮಾತನಾಡಿದ ಅವರು ವಿಶ್ವದಲ್ಲಿ 8 ಸಾವಿರಕ್ಕೂ ಹೆಚ್ಚು ರಕ್ತನಿಧಿಗಳು ಕಾರ್ಯನಿರ್ವಹಿಸುತ್ತಿವೆ. ಪ್ರತಿವರ್ಷ 152 ದಶಲಕ್ಷ ಯೂನಿಟ್ ರಕ್ತದ ಬೇಡಿಕೆ ಇದೆ. ಆದರೆ ಪೂರೈಕೆಯಾಗುತ್ತಿರುವುದು 96 ದಶಲಕ್ಷ ಯೂನಿಟ್. ಇನ್ನೂ 56 ದಶಲಕ್ಷ ಯೂನಿಟ್ ರಕ್ತದ ಕೊರತೆ ಆದ್ದರಿಂದ ಯುವಜನರು ರಕ್ತದಾನ ಮಾಡಲು ಮುಂದೆ ಬರಬೇಕು ಎಂದು ಹೇಳಿದರು.

ರಕ್ತ ಯಾವುದೇ ಕಾರ್ಖಾನೆ, ಪ್ರಯೋಗಾಲಯದಲ್ಲಿ ಉತ್ಪಾದಿಸಲಾಗುವುದಿಲ್ಲ. ಇದನ್ನು ಮನುಷ್ಯನಿಗೆ ಮಾತ್ರ ಉತ್ಪಾದಿಸುವ ಶಕ್ತಿ ಇದೆ. ಮೊದಲು 21 ದಿನ ರಕ್ತವನ್ನು ಕೆಡದಂತೆ ಸಂಗ್ರಹಿಸಿಡಲಾಗುತ್ತಿತ್ತು. ಈಗ 45 ದಿನಗಳ ಕಾಲ ರಕ್ತವನ್ನು ಸಂಗ್ರಹಿಸಿ ಇಡಬಹುದು. ರಕ್ತದಲ್ಲಿ ಅಗತ್ಯವಿರುವ ಘಟಕಗಳನ್ನು ಬೇರ್ಪಡಿಸಿ ಒಂದು ವರ್ಷದ ವರೆಗೂ ಕಾಯ್ದಿರಿಸಿಕೊಳ್ಳಬಹುದಾಗಿದೆ. ಹೀಗಾಗಿ ದಾನಿಗಳು ನೀಡುವ ರಕ್ತ ಯಾವುದೇ ಕಾರಣಕ್ಕೆ ವ್ಯರ್ಥವಾಗುವುದಿಲ್ಲ ಎಂದು ಹೇಳಿದರು.

ರಕ್ತದಾನ ಶಿಬಿರ ಉದ್ಘಾಟಿಸಿ ಮಾತನಾಡಿದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕ ಡಾ. ಬಿ.ಎನ್. ಧನ್ಯಕುಮಾರ್ ಮಾತನಾಡಿ, ನಿಯಮಗಳ ಪ್ರಕಾರ 18 ವರ್ಷ ದಾಟಿದವರು ರಕ್ತದಾನ ಮಾಡಬಹುದಾಗಿದೆ. ಆರೋಗ್ಯವಂತರಾಗಿದ್ದರೆ 16 ವರ್ಷಕ್ಕೆ ರಕ್ತದಾನ ಮಾಡಬಹುದು. ವರ್ಷಕ್ಕೆ ಎರಡು ಬಾರಿ ರಕ್ತದಾನ ಮಾಡುವುದರಿಂದ ಕೊಬ್ಬಿನಾಂಶ ಕಡಿಮೆಯಾಗುವುದಲ್ಲದೇ ಹೃದಯದ ಸಮಸ್ಯೆಗಳನ್ನೂ ಸಹ ತಡೆಗಟ್ಟಬಹುದು ಎಂದು ವಿವರಿಸಿದರು.

ಸಂಘದ ಪ್ರೀತಿ ಶ್ರೀನಿವಾಸನ್, ಶೇಷಾದ್ರಿಪುರಂ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ, ಪ್ರಾಂಶುಪಾಲ ಎಂ. ಪ್ರಕಾಶ್, ಟ್ರಸ್ಟ್ ಅಧ್ಯಕ್ಷ ಎಸ್.ಆರ್. ಪಂಡಿತಾರಾಧ್ಯ ಮುಂತಾದವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಸಂಜೆವಾಣಿ
ಗುರುವಾರ 13 ಜೂನ್ 2013

# ರಕ್ತದಾನ ಹಿಂಜರಿಕೆ ಬೇಡ: ಮಹಿಳೆಯರಿಗೆ ಮನವಿ

ಬೆಂಗಳೂರು, ಜೂ. ೧೩- ದೇಶದ ರಕ್ತದ ಕೊರತೆಯನ್ನು ನೀಗಿಸಲು ಹೆಣ್ಣುಮಕ್ಕಳು ರಕ್ತ ನೀಡಲು ಹೆಚ್ಚಿನ ಸಂಖ್ಯೆಯಲ್ಲಿ ಮುಂದೆ ಬರಬೇಕೆಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಟ್ರಸ್ಟ್‌ನ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಅವರು ಕರೆ ನೀಡಿದ್ದಾರೆ.

ರಕ್ತದಾನ ಮಾಡುವುದರಿಂದ ಅನಾರೋಗ್ಯ ಉಂಟಾಗುತ್ತದೆ. ದೇಹದ ಸೌಂದರ್ಯವನ್ನು ಕಾಪಾಡಿಕೊಳ್ಳಲು ಸಾಧ್ಯವಿಲ್ಲ ಎಂಬ ತಪ್ಪು ಅಭಿಪ್ರಾಯವನ್ನು ಬದಿಗೊತ್ತಿ ಹೆಣ್ಣುಮಕ್ಕಳು ರಕ್ತವನ್ನು ನೀಡಬೇಕೆಂದು ಹೇಳಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಕಾಲೇಜಿನ ಸಭಾಂಗಣದಲ್ಲಿ ಏರ್ಪಡಿಸಿದ್ದ ವಿಶ್ವ ರಕ್ತದಾನಿಗಳ ದಿನಾಚರಣೆಯ ಉದ್ಘಾಟನಾ ಸಮಾರಂಭದ ಮುಖ್ಯ ಅತಿಥಿಯಾಗಿ ಪಾಲ್ಗೊಂಡು ಮಾತನಾಡಿದ ಅವರು ರಕ್ತದಾನ ಮಾಡುವುದು ಮಾನವೀಯ ಸೇವೆ. ವರ್ಷಕ್ಕೊಮ್ಮೆ ರಕ್ತ ನೀಡಿದರೆ ದೇಶ ಎದುರಿಸುತ್ತಿರುವ ರಕ್ತದ ಕೊರತೆಯನ್ನು ತಪ್ಪಿಸಬಹುದು ಎಂದು ಅವರು ಅಭಿಪ್ರಾಯಪಟ್ಟರು.

ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ನಿರ್ದೇಶಕ ಡಾ. ಬಿ.ಎನ್. ಧನ್ಯಕುಮಾರ್ ಅವರು ಮಾತನಾಡಿ, ಆರೋಗ್ಯವಂತ ಮನುಷ್ಯ ವರ್ಷಕ್ಕೆ 4 ಬಾರಿಯಾದರೂ ರಕ್ತ ನೀಡಬಹುದು. ಆದರೂ ಕನಿಷ್ಠಪಕ್ಷ ಒಂದು ಬಾರಿಯಾದರೂ ರಕ್ತ ನೀಡಲು ಮುಂದೆ ಬರಬೇಕು. ರಕ್ತದಾನ ಶಿಬಿರಗಳಲ್ಲಿ ಹೆಚ್ಚು ರಕ್ತವನ್ನು ಪಡೆಯುತ್ತಾರೆ ಎಂಬುದು ತಪ್ಪು ಕಲ್ಪನೆ. ಕೇವಲ 450 ಎಂ.ಎಲ್.ಗಳಷ್ಟು ರಕ್ತವನ್ನು ಮಾತ್ರವೇ ಪಡೆಯಲಾಗುವುದು ಎಂದು ಹೇಳಿದರು.



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ರಕ್ತದಾನಿಗಳ ದಿನಾಚರಣಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದ ಕಾಲೇಜು ವಿದ್ಯಾರ್ಥಿಗಳು ರಕ್ತದಾನ ಮಾಡುವ ಜಾಗೃತಿ ಬಿತ್ತಿಚಿತ್ರ ಪ್ರದರ್ಶಿಸಿದರು.

ಕರ್ನಾಟಕ ಸ್ವಯಂಪ್ರೇರಣಾ ರಕ್ತದಾನಿಗಳ ಸಂಘದ ಅಧ್ಯಕ್ಷ ಡಾ. ರಾಜು ಚಂದ್ರಶೇಖರ್ ಮಾತನಾಡಿ, ದೇಶದಲ್ಲಿ 152 ದಶಲಕ್ಷ ಯುನಿಟ್‌ನಷ್ಟು ರಕ್ತದ ಬೇಡಿಕೆ ಇದೆ. ಆದರೆ, ಕೇವಲ 96 ದಶಲಕ್ಷ ಯುನಿಟ್ ರಕ್ತ ಮಾತ್ರ ಸಂಗ್ರಹಣೆಯಾಗುತ್ತಿದೆ. ಈ ಅಂತರವನ್ನು ಸರಿದೂಗಿಸಲು ಈ ಆರೋಗ್ಯವಂತ ಮನುಷ್ಯ ಜೀವಮಾನದವರೆಗೂ ರಕ್ತವನ್ನು ದಾನ ಮಾಡಬೇಕೆಂದು ಮನವಿ ಮಾಡಿದರು.

ದೇವರಿಗೆ ಹರಕೆ ರೂಪದಲ್ಲಿ ಏನನ್ನಾದರೂ ಸಲ್ಲಿಸುವಂತೆ ರಕ್ತವನ್ನು ಹರಕೆ ರೂಪದಲ್ಲೇ ದಾನ ಮಾಡುವಂತೆ ಹೇಳಿದ ಅವರು, ರಕ್ತವನ್ನು ಈವರೆಗೂ ಯಾರೂ ಸೃಷ್ಟಿಸಿಲ್ಲ. ಹಾಗಾಗಿ ಎಲ್ಲರೂ ರಕ್ತ ನೀಡಲು ಮುಂದೆ ಬರಬೇಕೆಂದು ಹೇಳಿದರು.

ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಪಂಡಿತಾರಾಧ್ಯ ಮಾತನಾಡಿ, ಪ್ರತಿಯೊಬ್ಬರೂ ರಕ್ತದಾನ ಮಾಡುವುದರಿಂದ ಯಮನನ್ನೂ ಎದೆಗಾಂಧಿಸಬಹುದೆಂದು ಅಭಿಪ್ರಾಯಪಟ್ಟರು.

ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಕಿರುತೆರೆ ನಟಿ ಶ್ರುತಿ ಶ್ರೀನಿವಾಸನ್ ಅವರು ವೈದ್ಯರಷ್ಟೇ ಪ್ರಾಣ ಉಳಿಸಬಹುದು. ಜತೆಗೆ ದಾನಿಗಳು ವೈದ್ಯರಂತೆ ಒಬ್ಬರ ಪ್ರಾಣವನ್ನು ಉಳಿಸಲು ಸಾಧ್ಯ ಎಂದು ತಮ್ಮ ವೈದ್ಯಪತಿ ಪದೇ ಪದೇ ಹೇಳುತ್ತಾರೆ ಎಂದು ನೆನಪಿಸಿಕೊಂಡರು. ಈ ಸಂದರ್ಭದಲ್ಲಿ ರಕ್ತದಾನ ಜಾಗೃತಿ ಬಗೆಗಿನ ಮಾಹಿತಿ ಇರುವ ಕೈಪಿಡಿಯನ್ನು ಬಿಡುಗಡೆ ಮಾಡಲಾಯಿತು.

ಈ ಸಂದರ್ಭದಲ್ಲಿ ಸಂತ ನಿರಹಂಕಾರಿ ಮಂಡಲ್‌ನ ದೇವ ಬಜಾಜ್, ಮಧುಶ್ರೀ, ಡಿ.ಎಸ್. ಮ್ಯಾಕ್ಸ್ ಪಾವರ್ಟಿ ಫ್ರೀ ನಿರ್ದೇಶಕ ದಯಾನಂದ್, ಹಲಸೂರಿನ ಜೈನ ಯುವಕ ಸಂಘದ ದಿಲೀಪ್, ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಕೆ.ಎಲ್.ಇ. ನಿಜಲಿಂಗಪ್ಪ ಕಾಲೇಜಿನ ಸುರೇಶ್ ಎಗಡಿ ಹಾಗೂ ರಕ್ತದಾನಿಗಳಾದ ಪ್ರತಾಪ್ ಲಿಂಗಯ್ಯ, ವಿಶ್ವನಾಥ್, ಎಸ್. ಸೆಂಥಿಲ್ ಕುಮಾರ್, ವಿ.ಎಸ್. ಶರ್ಮ, ಪ್ರೊ. ಎಂ.ಜಿ. ರಮೇಶ್ ಅವರನ್ನು ಸನ್ಮಾನಿಸಲಾಯಿತು. ಕಾಲೇಜಿನ ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಸ್ವಾಗತಿಸಿದರು. ಯೂಥ್ ರೆಡ್ ಕ್ರಾಸ್ ಸಂಸ್ಥೆಯ ಯೋಜನಾಧಿಕಾರಿ ಪ್ರೊ. ಎಂ.ಜಿ. ರಮೇಶ್ ವಂದಿಸಿದರು. ಖಜಾಂಚಿ ಪಾರ್ಥಸಾರಥಿ ಮತ್ತು ಸರೋಜಾ ನಂಜಪ್ಪ ಉಪಸ್ಥಿತರಿದ್ದರು.

# ಭಾರತದಲ್ಲಿ ರಕ್ತದಾನಿಗಳ ಕೊರತೆ

ಬೆಂಗಳೂರು, ಜೂ.13-ವಿಶ್ವದಲ್ಲಿ ವೃತ್ತಿಪರ ರಕ್ತದಾನವನ್ನು ಸುಪ್ರೀಂ ಕೋರ್ಟ್ ನಿಷೇಧಿಸಿದ ನಂತರ ಭಾರತದಲ್ಲಿ ರಕ್ತದಾನಿಗಳ ಕೊರತೆ ತೀವ್ರವಾಗಿದೆ ಎಂದು ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್ ತಿಳಿಸಿದರು.

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ವತಿಯಿಂದ ಏರ್ಪಡಿಸಿದ್ದ ರಕ್ತದಾನ ಶಿಬಿರದಲ್ಲಿ ಮಾತನಾಡಿದ ಅವರು, ವಿಶ್ವದಲ್ಲಿ 8 ಸಾವಿರಕ್ಕೂ ಹೆಚ್ಚು ರಕ್ತನಿಧಿಗಳು ಕಾರ್ಯನಿರ್ವಹಿಸುತ್ತಿವೆ. ಪ್ರತಿವರ್ಷ 152 ದಶಲಕ್ಷ ಯೂನಿಟ್ ರಕ್ತದ ಬೇಡಿಕೆ ಇದೆ. ಆದರೆ ಪೂರೈಕೆಯಾಗುತ್ತಿರುವುದು ಮಾತ್ರ 96 ದಶಲಕ್ಷ ಯೂನಿಟ್. ಇನ್ನು 56 ದಶಲಕ್ಷ ಯೂನಿಟ್ ರಕ್ತದ ಕೊರತೆ ಇವೆ. ಈ ನಿಟ್ಟಿನಲ್ಲಿ ಯುವಜನತೆ ಶುಭ ಸಂದರ್ಭಗಳ ಆಚರಣೆ ವೇಳೆ ರಕ್ತದಾನ ಮಾಡುವಂತೆ ಸಲಹೆ ನೀಡಿದರು. ವಿಜ್ಞಾನ ಮುಂದುವರೆದಿದ್ದು ಚಂದ್ರನವರೆಗೂ ತಲುಪಿದೆ, ಪರಮಾಣು ಶಕ್ತಿ ಕಂಡುಹಿಡಿದಿದೆ, ಆದರೆ ರಕ್ತ ಉತ್ಪಾದನೆ ಮಾತ್ರ ಸಾಧ್ಯವಾಗಿಲ್ಲ, ರಕ್ತವನ್ನು ಯಾವುದೇ ಕಾರ್ಖಾನೆ, ಪ್ರಯೋಗಾಲಯಗಳಲ್ಲೂ ಉತ್ಪಾದಿಸಲಾಗುವುದಿಲ್ಲ, ಇದನ್ನು ಮನುಷ್ಯನಿಗೆ ಮಾತ್ರ ಉತ್ಪಾದಿಸುವ ಶಕ್ತಿ ಇದೆ.

ವಿಜ್ಞಾನ ಮುಂದುವರೆದಿದ್ದು ಮೊದಲು 21 ದಿನ ರಕ್ತವನ್ನು ಕೆಡದಂತೆ ಸಂರಕ್ಷಿಸಲಾಗುತ್ತಿತ್ತು, ಈಗ 45 ದಿನಗಳ ಕಾಲದವರೆಗೂ ರಕ್ತವನ್ನು ಕೆಡದಂತೆ ರಕ್ಷಿಸುವ ತಂತ್ರಜ್ಞಾನವಿದೆ.

ರಕ್ತದಲ್ಲಿ ಅಗತ್ಯವಿರುವ ಘಟಕಗಳನ್ನು ಬೇರ್ಪಡಿಸಿ ಒಂದು ವರ್ಷಗಳವರೆಗೂ ಕಾಯ್ದಿರಿಸಿಕೊಳ್ಳಬಹುದಾಗಿದೆ. ಹೀಗಾಗಿ ದಾನಿಗಳು ನೀಡುವ ರಕ್ತ ಯಾವುದೇ ಕಾರಣಕ್ಕೂ ವ್ಯರ್ಥವಾಗುವುದಿಲ್ಲ ಎಂದರು.

ರಕ್ತದಾನಕ್ಕೆ ಸುಮಾರು 450 ವರ್ಷಗಳ ಇತಿಹಾಸವಿದ್ದು ಆರಂಭದಲ್ಲಿ ತಾಯಿ ರಕ್ತವನ್ನು ಮಕ್ಕಳಿಗೆ ನೀಡಲಾಗುತ್ತಿತ್ತು ಅಲ್ಲದೆ ರಕ್ತಗಳ ಗುಂಪುಗಳನ್ನು ಪರಿಶೀಲಿಸುತ್ತಿರಲಿಲ್ಲ, ಇದರಿಂದ ಉಂಟಾಗುವ ಅಪಾಯಗಳು ಕಾಲಾನಂತರದ ಸಂಶೋಧನೆಯಿಂದ ತಪ್ಪಿಸಲಾಗಿದೆ ಎಂದು ತಿಳಿಸಿದರು.

ರಕ್ತದ ಗುಂಪುಗಳನ್ನು ಸಂಗ್ರಹಿಸಿದ್ದ ಕಾರ್ಲ್ ಲ್ಯಾಂಪ್ ಸ್ಟೈನ್ ಜನದಿನಾಚರಣೆ ದಿನವಾದ ಜೂನ್ 14ನ್ನು ವಿಶ್ವ ಸ್ವಯಂ ರಕ್ತದಾನಿಗಳ ದಿನವನ್ನಾಗಿ ಆಚರಿಸಲಾಗುತ್ತಿದೆ ಎಂದರು.

ರಕ್ತದಾನ ಶಿಬಿರವನ್ನು ಉದ್ಘಾಟಿಸಿ ಮಾತನಾಡಿದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕ ಡಾ.ಬಿ.ಎನ್.ಧನ್ಯ ಕುಮಾರ್ ಮಾತನಾಡಿ, ನಿಯಮಾವಳಿಗಳ ಪ್ರಕಾರ 18 ವರ್ಷ ದಾಟಿದವರು ರಕ್ತದಾನ ಮಾಡಬಹುದಾಗಿದೆ. ಆರೋಗ್ಯವಂತರಾಗಿದ್ದರೆ 16 ವರ್ಷಕ್ಕೆ ರಕ್ತದಾನ ಪ್ರಾರಂಭಿಸಬಹುದು.

ಪ್ರತಿ ಮನುಷ್ಯ ವರ್ಷಕ್ಕೆ ಎರಡು ಬಾರಿ ರಕ್ತದಾನ ಮಾಡಿದರೆ ದೇಹದಲ್ಲಿನ ಕೊಬ್ಬಿನಾಂಶ ಕಡಿಮೆಯಾಗಿ ಶೇ.80ರಷ್ಟು ಹೃದಯಾಘಾತದ ಸಮಸ್ಯೆಗಳು ಕಡಿಮೆಯಾಗುತ್ತವೆ ಎಂದು ವಿವರಿಸಿದರು.

ಶಿಬಿರದಲ್ಲಿ ಕರ್ನಾಟಕ ಸ್ವಯಂ ರಕ್ತದಾನಿಗಳ ಸಂಘದ ಪ್ರೀತಿ ಶ್ರೀನಿವಾಸನ್, ಶೇಷಾದ್ರಿಪುರಂ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ, ಪ್ರಾಂಶುಪಾಲ ಎಂ.ಪ್ರಕಾಶ್, ಟ್ರಸ್ಟ್‌ನ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಮತ್ತಿತರರು ಭಾಗವಹಿಸಿದ್ದರು.



ವಿಶ್ವ ರಕ್ತದಾನ ದಿನಾಚರಣೆ ಅಂಗವಾಗಿ ಇಂದು ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ರಕ್ತಾದಾನ ಶಿಬಿರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ನಿರ್ದೇಶಕ ಧ್ಯಾನಕುಮಾರ್, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್.ಪಂಡಿತ್ ಆಚಾರ್ಯ, ಪ್ರಧಾನ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಕರ್ನಾಟಕ ಸ್ವಯಂ ರಕ್ತದಾನ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್, ನಟಿ ಪ್ರೀತಿ ಶ್ರೀನಿವಾಸ್, ಪ್ರಾಂಶುಪಾಲ ಎಂ.ಪ್ರಕಾಶ್ ಮತ್ತಿತರರಿದ್ದರು.

# ಚಿಣ್ಣರಿಂದ 'ಕಿಂದರಿ ಜೋಗಿ' ವಿಸ್ಮಯ



ರಂಗಭೂಮಿ, ಅಭಿನಯದ ಗಂಧಗಾಳಿಯೂ ಅರಿಯದ ಪುಟ್ಟ ಪುಟ್ಟ ಮಕ್ಕಳು ಕೇವಲ ಹತ್ತೇ ಹತ್ತು ದಿನಗಳಲ್ಲಿ ಒಂದು ನಾಟಕವನ್ನು ಸಭಿಕರ ಮುಂದೆ ಪ್ರಸ್ತುತ ಪಡಿಸಲು ಸಾಧ್ಯ ಎಂಬುದನ್ನು ಸಾಬೀತುಪಡಿಸಿದರು. ಇಂತಹದೊಂದು ರಂಗಪ್ರಯೋಗ ನಡೆದಿದ್ದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ. ಅಷ್ಟೂ ಮಂದಿ ಮಕ್ಕಳು ಬಂದಿದ್ದು ಮೈಸೂರಿನ ವಿವಿಧ ಶಾಲೆಗಳಿಂದ. ಅವರು ಪ್ರಸ್ತುತಪಡಿಸಿದ್ದು ಕುವೆಂಪು ಅವರ ಜನಪ್ರಿಯ ನಾಟಕ 'ಬೊಮ್ಮನಹಳ್ಳಿಯ ಕಿಂದರಿಜೋಗಿ'.

ಮೈಸೂರಿನಲ್ಲಿ ಬೇಸಿಗೆ ಶಿಬಿರದ ನೆಪದಲ್ಲಿ ಮಕ್ಕಳನ್ನೆಲ್ಲ ಗುಡ್ಡೆ ಹಾಕಿಕೊಂಡು ಅವರಿಗೆ ರಂಗ ತರಬೇತಿ ನೀಡಿದ ಖ್ಯಾತ ರಂಗಕರ್ಮಿ ಸಿ.ಲಕ್ಷ್ಮಣ ಅವರು ಅಷ್ಟೂ ಮಕ್ಕಳನ್ನು ಬೆಂಗಳೂರಿಗೆ ತಂದು ಅವರಿಂದ ಪ್ರದರ್ಶನ ನೀಡುವ ಕೆಲಸದಲ್ಲಿ ಯಶಸ್ವಿಯಾಗಿದ್ದಾರೆ. ಮೈಸೂರಿನ ಗೌರಿಶಂಕರ ಸಾಂಸ್ಕೃತಿಕ ಕ್ರೀಡಾ ದತ್ತಿ ಸಂಸ್ಥೆ ಮತ್ತು ಬೆಂಗಳೂರಿನ ರಂಗಕಹಳೆ ಈ ಪ್ರದರ್ಶನಕ್ಕೆ ಏರ್ಪಡಿಸಿತ್ತು.

ರಂಗಭೂಮಿಗೆ ತಾವಿನ್ನೂ ಹೊಸಬರು ಎಂಬುದನ್ನು ತೋರಗೊಡದೇ ಮಕ್ಕಳು ಅಭಿನಯ ನೀಡಿದ್ದು ವಿಶೇಷ. ಮೋಹನ್ ಮತ್ತು ಒಪಿಲೇಶ್ ಅವರ ರಂಗಸಜ್ಜಿಕೆ ಹಾಗೂ ಬೆಳಕಿನ ಆಟದಲ್ಲಿ ಇಡೀ ನಾಟಕ ಕಳೆಕಟ್ಟಿತ್ತು. ಕಿಂದರಿ ಜೋಗಿ ಪಾತ್ರದಲ್ಲಿ ಕಾಣಿಸಿಕೊಂಡ ಕಾವ್ಯ ಎಸ್. ಒಟ್ಟೂ ನಾಟಕದ ಹೈಲೈಟ್. ಆರಂಭದಲ್ಲಿ ಹಿಂಡುಹಿಂಡಾಗಿ ಬೊಮ್ಮನಹಳ್ಳಿಯ ಬರುವ ಇಲಿಗಳು ನಾಟಕಕ್ಕೆ ಓಘವನ್ನು ನೀಡಿದರೆ ಕಿಂದರಿ ಬಾರಿಸುತ್ತ ದಿಢೀರ್ ಪ್ರತ್ಯಕ್ಷನಾಗುವ ಜೋಗಿ ತನ್ನ ಕಣ್ಣಿನ ಚಲನೆ, ಚುರುಕು ಅಭಿನಯ, ಗತ್ತು ಗೈರತ್ತಿನ ಮೂಲಕ ನೆರೆದವರ ದೃಷ್ಟಿ ಕಿಂಚಿತ್ತೂ ಚಲಿಸದಂತೆ ಮಾಡಿಬಿಟ್ಟರು. ಮಕ್ಕಳ ಚಿಲಿಪಿಲಿಯ ನಡುವೆಯೇ ನಾಟಕ ಮುಗಿದಿದ್ದು ತಿಳಿಯದಂತಾಯಿತು. ಜಸ್ಟೀಸ್ ಎ.ಜೆ.ಸದಾಶಿವ, ಡಾ.ಬಿ.ವಿ.ರಾಜಾರಾಮ್, ಇಕ್ಬಾಲ್ ಅಹ್ಮದ್ ಮತ್ತು ತಾಜುಮ ಅವರ ಹಿನ್ನೆಲೆ ಧ್ವನಿಯೂ ಇದಕ್ಕೆ ಪೂರಕವಾಗಿತ್ತು ಎಂಬುದರಲ್ಲಿ ಎರಡು ಮಾತಿಲ್ಲ.

ಇದಕ್ಕೂ ಮುನ್ನ ನಡೆದ ಉದ್ಘಾಟನೆಯಲ್ಲಿ ಪಾಲ್ಗೊಂಡವರು ಶಾಸಕರಾದ ಬೈರತಿ ಬಸವರಾಜ್, ವಾಸು ಹಾಗೂ ರಾಜ್ಯ ಯೋಜನಾ ನಿರ್ದೇಶಕ ಸುಬೋಧ್ ಯಾದವ್. ಶೇಷಾದ್ರಿಪುರಂ ವಿದ್ಯಾಸಮೂಹ ಸಂಸ್ಥೆಯ ವ್ರೊ.ಡೇ.ಪಿ. ಕೃಷ್ಣ, ಸಮಾಜ ಸೇವಕ ಎಸ್.ಅರುಣ್‌ಕುಮಾರ್, ಆರ್ಯಭಟ ಪ್ರಶಸ್ತಿ ವಿಜೇತ ಎಚ್.ಎಸ್.ಎಂ. ಪ್ರಕಾಶ್ ಅವರನ್ನು ಈ ಸಂದರ್ಭದಲ್ಲಿ ಅಭಿನಂದಿಸಲಾಯಿತು.



**ರಕ್ತದಾನ**

ವಿಶ್ವ ರಕ್ತದಾನಿಗಳ ದಿನಕ್ಕೆ ಪೂರ್ವಭಾವಿಯಾಗಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಗುರುವಾರ ಶೇಷಾದ್ರಿಪುರ ಕಾಲೇಜ್‌ನಲ್ಲಿ ರಕ್ತದಾನ ಶಿಬಿರ ಏರ್ಪಡಿಸಿತು.

ಶುಕ್ರವಾರ
14 ಜೂನ್ 2013

ವಿಜಯವಾಣಿ
BANGALORE

ಹೊಸ ದಿಗಂತ
ಬೆಂಗಳೂರು
ಶುಕ್ರವಾರ, 14 ಜೂನ್ 2013

# ರಕ್ತದಾನ ಮಾಡಿ, ಆರೋಗ್ಯ ಕಾಪಾಡಿ

**ಬೆಂಗಳೂರು:** ರಕ್ತದಾನದಿಂದ ದೇಹದಲ್ಲಿ ಕೊಬ್ಬಿನ ಅಂಶ ಕಡಿಮೆಯಾಗುವುದರ ಜತೆಗೆ ಹೃದಯ ಸಂಬಂಧ ಕಾಯಿಲೆಗಳು ಶೇ.80 ರಷ್ಟು ಕ್ಷೀಣಿಸುತ್ತವೆಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕ ಡಾ.ಬಿ.ಎನ್.ಧನ್ಯಕುಮಾರ್ ಅಭಿಪ್ರಾಯಪಟ್ಟಿದ್ದಾರೆ.

ನಗರದಲ್ಲಿ ಗುರುವಾರ ಸ್ವಯಂ ರಕ್ತದಾನಿಗಳ ಸಂಘದಿಂದ ಏರ್ಪಡಿಸಲಾಗಿದ್ದ ವಿಶ್ವ ರಕ್ತದಾನಿಗಳ ದಿನಾಚರಣೆ ಉದ್ಘಾಟಿಸಿ ಮಾತನಾಡಿದ ಅವರು, 18 ವರ್ಷ ತುಂಬಿದವರು ವರ್ಷಕ್ಕೆ ಎರಡು ಬಾರಿ ರಕ್ತದಾನ ಮಾಡಬಹುದು ಇದರಿಂದ ಯಾವುದೇ ಸಮಸ್ಯೆಯಿಲ್ಲ. ರಕ್ತ ಶುದ್ಧಿಯ ಜತೆಗೆ ಹೃದಯ ಸಂಬಂಧಿ ಕಾಯಿಲೆಯೇ ಬರುವುದಿಲ್ಲ ಹಾಗೂ ದೇಹದಲ್ಲಿರುವ ಕೊಬ್ಬಿನ ಅಂಶವು ಕಡಿಮೆಯಾಗಿ ಆರೋಗ್ಯವಂತರಾಗಿರಬಹುದು. ಒಮ್ಮೆಗೆ 450 ಎಂ.ಎಲ್ ರಕ್ತವನ್ನು ಮಾತ್ರ ಪಡೆಯಲಾಗುತ್ತದೆ. ಎಷ್ಟೇ ಅಗತ್ಯವಿದ್ದರೂ ಇದಕ್ಕಿಂತ ಹೆಚ್ಚು ರಕ್ತ ಪಡೆಯುವುದಿಲ್ಲ ಎಂದು ಸ್ಪಷ್ಟಪಡಿಸಿದರು. ರಾಜ್ಯ ಸ್ವಯಂ ರಕ್ತದಾನಿಗಳ ಸಂಘದ ಅಧ್ಯಕ್ಷ ರಾಜು ಚಂದ್ರಶೇಖರ್ ಮಾತನಾಡಿ, ಸುಪ್ರೀಂ ಕೋರ್ಟ್ ವೃತ್ತಿಪರ ರಕ್ತದಾನ ನಿಷೇಧಿಸಿದ್ದರ ಪರಿಣಾಮ ಭಾರತದಲ್ಲಿ ರಕ್ತದಾನಿಗಳ ಕೊರತೆ ಹೆಚ್ಚಾಗಿದೆ. ವಿಶ್ವ ಮಟ್ಟದಲ್ಲಿ ಪ್ರತಿ ವರ್ಷ 152 ದಶಲಕ್ಷ ಯುನಿಟ್ ರಕ್ತದ ಬೇಡಿಕೆಯಿರುತ್ತದೆ. ಆದರೆ, ಪೂರೈಕೆ ಮಾತ್ರ 96 ದಶಲಕ್ಷ ಯುನಿಟ್‌ನಷ್ಟು ಇದೆ. ಇನ್ನು 56 ದಶಲಕ್ಷ ಯುನಿಟ್ ರಕ್ತದ ಪೂರೈಕೆಯಾಗಬೇಕಿದೆ. ಈ ನಿಟ್ಟಿನಲ್ಲಿ ಯುವ ಜನತೆ ರಕ್ತದಾನದಲ್ಲಿ ಹೆಚ್ಚಾಗಿ ತೊಡಗಿಕೊಳ್ಳಬೇಕು.

ರಕ್ತಕ್ಕೆ ಯಾವುದೇ ಪರ್ಯಾಯವಿಲ್ಲ. ಕೃತಕವಾಗಿ ತಯಾರಿಸಲು ಸಾಧ್ಯವಿಲ್ಲ. ಮನುಷ್ಯನ ಶರೀರದಲ್ಲಿ ಸ್ವಾಭಾವಿಕವಾಗಿ ಅದು ಉತ್ಪತ್ತಿಯಾಗಬೇಕು. ಹೀಗಾಗಿ ರಕ್ತದಾನದ ಅವಶ್ಯಕತೆ ಇಂದು ಬಹಳಷ್ಟಿದೆ ಎಂಬ ಅಭಿಪ್ರಾಯಪಟ್ಟರು.

ಶೇಷಾದ್ರಿಪುರ ವಿದ್ಯಾಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ, ಪ್ರಾಂಶುಪಾಲರಾದ ಎಂ.ಪ್ರಕಾಶ್, ಟ್ರಸ್ಟ್‌ನ ಅಧ್ಯಕ್ಷ ಎನ್.ಆರ್ ಪಂಡಿತಾರಾಧ್ಯ ಮೊದಲಾದವರು ಉಪಸ್ಥಿತರಿದ್ದರು.

ಪ್ರಜಾವಾಣಿ

ಸೋಮವಾರ
28ನೇ ಮೇ 2012

'ಪ್ರಜಾವಾಣಿ-ಡೆಕ್ಕನ್ ಹೆರಾಲ್ಡ್' ಪತ್ರಿಕಾ ಬಳಗದ ಕಾರ್ಯಕ್ಕೆ ಶ್ಲಾಘನೆ, 'ಜ್ಞಾನದೇಗುಲ' ಶಿಕ್ಷಣ ಮೇಳಕ್ಕೆ ತೆರೆ

# ಸಿಇಟಿ ಮಾಹಿತಿಗೆ ಮುಗಿಬಿದ್ದ ವಿದ್ಯಾರ್ಥಿ ಸಮೂಹ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಪ್ರಜಾವಾಣಿ' ಮತ್ತು 'ಡೆಕ್ಕನ್ ಹೆರಾಲ್ಡ್' ಪತ್ರಿಕಾ ಸಮೂಹದ ಆಶ್ರಯದಲ್ಲಿ ನಗರದ ಅರಮನೆ ಮೈದಾನದ 'ತ್ರಿಪುರ ವಾಸಿನಿ'ಯಲ್ಲಿ ಏರ್ಪಡಿಸಿದ್ದ 'ಜ್ಞಾನ ದೇಗುಲ' ಶಿಕ್ಷಣ ಮೇಳದಲ್ಲಿ ಎರಡನೇ ದಿನವಾದ ಭಾನುವಾರವೂ ವಿದ್ಯಾರ್ಥಿಗಳು ಹಾಗೂ ಪೋಷಕರು ಸಿಇಟಿ ಮಾಹಿತಿಗಾಗಿ ಮುಗಿಬಿದ್ದರು. ಆ ಮೂಲಕ ಎರಡು ದಿನಗಳ 'ಜ್ಞಾನ ದೇಗುಲ' ಶಿಕ್ಷಣ ಮೇಳಕ್ಕೆ ಅಂತಿಮ ತೆರೆ ಬಿದ್ದಿತು.

ಸುಮಾರು ಐದು ಸಾವಿರಕ್ಕೂ ಅಧಿಕ ಮಂದಿ ಶಿಕ್ಷಣ ಮೇಳದ ಲಾಭ ಪಡೆದರು. ಸಾವಿರಾರು ಮಂದಿ ಐದು ಗೋಷ್ಠಿಗಳ ಪ್ರಯೋಜನ ಪಡೆದರು. ಮಳಿಗೆಗಳ ಬಗ್ಗೆಯೂ ಮೆಚ್ಚುಗೆ ವ್ಯಕ್ತವಾಯಿತು.

'ಪ್ರಜಾವಾಣಿ' ಮತ್ತು 'ಡೆಕ್ಕನ್ ಹೆರಾಲ್ಡ್' ಪತ್ರಿಕಾ ಸಮೂಹದ ಕಾಳಜಿ ಶ್ಲಾಘನೀಯ ಎಂದು ಮೇಳದಲ್ಲಿ ಪಾಲ್ಗೊಂಡವರು ಮೆಚ್ಚುಗೆ ವ್ಯಕ್ತಪಡಿಸಿದರು. ಸಿಇಟಿ ಆಯ್ಕೆ ಪ್ರಕ್ರಿಯೆಗೆ ಕೆಲವೇ ದಿನಗಳು ಉಳಿದಿರುವಾಗ ಸಿಇಟಿ ಬಗ್ಗೆ ಮಾಹಿತಿ ನೀಡಿರುವುದು ಸಕಾಲಿಕ ಎಂದು ಪೋಷಕರು ಸಂತಸ ವ್ಯಕ್ತಪಡಿಸಿದರು. ಸಿಇಟಿ ಗೋಷ್ಠಿ ಮುಗಿದ ಬಳಿಕವೂ ಸುಮಾರು ಹೊತ್ತು ಸಂಪನ್ಮೂಲ ವ್ಯಕ್ತಿಗಳಲ್ಲಿ ವಿದ್ಯಾರ್ಥಿಗಳು ಮಾಹಿತಿ ಪಡೆದುಕೊಂಡರು.

'ನಿರ್ವಹಣಾ ಶಿಕ್ಷಣದಲ್ಲಿ ಅವಕಾಶಗಳು' ಕುರಿತು ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ಸಮೂಹದ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ, 'ಐವತ್ತು ವರ್ಷಗಳ ಹಿಂದೆ ನಿರ್ವಹಣಾ ಶಿಕ್ಷಣ ಕ್ಷೇತ್ರ ವಾಣಿಜ್ಯ ಶಿಕ್ಷಣದ ಭಾಗವಾಗಿತ್ತು, ಇದರ ಬಗ್ಗೆ ಜನರಿಗೆ ಹೆಚ್ಚು ಜಾಗೃತಿಯೂ ಇರಲಿಲ್ಲ. ಈಗ ದೇಶದಲ್ಲಿ 1250 'ಬಿ' ಸ್ಕೂಲ್‌ಗಳಿದ್ದು, 1.25 ಲಕ್ಷ ವಿದ್ಯಾರ್ಥಿಗಳು ಪ್ರತಿ ವರ್ಷ ಶಿಕ್ಷಣ ಪಡೆಯುತ್ತಿದ್ದಾರೆ. ಒಂದು ಲಕ್ಷ ಮಂದಿ ದೂರಶಿಕ್ಷಣ ಮೂಲಕ ಎಂಬಿಎ ಶಿಕ್ಷಣ ಪಡೆಯುತ್ತಿದ್ದಾರೆ' ಎಂದರು.

'ನಿರ್ವಹಣಾ ಶಿಕ್ಷಣ ಜಾಗತಿಕ ಮನೋಭಾವದ ನಾಯಕರನ್ನು ರೂಪಿಸುತ್ತದೆ. ಶೇ 85ರಷ್ಟು ಕಂಪೆನಿಗಳು ಜಾಗತಿಕ , ನಾಯಕರನ್ನು ಆಯ್ಕೆ ಮಾಡಿಕೊಳ್ಳಲು ಇಷ್ಟಪಡುತ್ತವೆ. ಎಂಬಿಎ ಪದವೀಧರರನ್ನು ನಾಯಕರನ್ನಾಗಿ ಪರಿವರ್ತಿಸುತ್ತದೆ' ಎಂದ ಬಣ್ಣಿಸಿದರು.

ಮೈಸೂರು ವಿಶ್ವವಿದ್ಯಾಲಯದ ಮಾಹಿತಿ ವಿಜ್ಞಾನದ ಅಂತರರಾಷ್ಟ್ರೀಯ ಶಾಲೆ ನಿರ್ದೇಶಕಿ ಪ್ರೊ. ಶಾಲಿನಿ ಅರಸ್ , 'ವ್ಯವಹಾರಿಕ ಕ್ಷೇತ್ರದಲ್ಲಿ ಹೊಸ ಅವಕಾಶ' ಕುರಿತು ಉಪನ್ಯಾಸ ನೀಡಿ, 'ದಕ್ಷಿಣ ಭಾರತದ ಯುವಜನತೆ ಎಂಜಿನಿಯರಿಂಗ್ ಹಾಗೂ ವೈದ್ಯಕೀಯ ಶಿಕ್ಷಣ ಕಲಿತರೆ ಶ್ರೇಷ್ಠ ಹಾಗೂ ಅಲ್ಲಿ ಸಾಕಷ್ಟು ಉದ್ಯೋಗಾವಕಾಶ ಲಭ್ಯವಿದೆ ಎಂದು ಭಾವಿಸಿದ್ದಾರೆ. ಆದರೆ, ಉತ್ತರ ಭಾರತದಲ್ಲಿ ವಿದ್ಯಾರ್ಥಿಗಳು ಈ ಎರಡು ಕ್ಷೇತ್ರ ಹೊರತುಪಡಿಸಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಕಲಿಕೆಗೆ ಹೆಚ್ಚು ಒತ್ತು ನೀಡುತ್ತಾರೆ' ಎಂದರು.

'ಆಧುನಿಕ ಕಾಲಘಟ್ಟದಲ್ಲಿ ವಿದ್ಯಾರ್ಥಿಗಳಿಗೆ ಅವಕಾಶಗಳ ಬಾಗಿಲು ತೆರೆದಿದ್ದು, ಕೌಶಲ ಅಳವಡಿಸಿಕೊಂಡು ಯಶಸ್ಸು ಗಳಿಸಬೇಕು. ಯುವಜನತೆ ತಮಗೆ ಖುಷಿ ನೀಡುವಂತಹ ವೃತ್ತಿಯನ್ನು ಆಯ್ದುಕೊಳ್ಳಬೇಕು' ಎಂದು ಅವರು ಸಲಹೆ ನೀಡಿದರು.

'ಅನಿಮೇಶನ್, ಗೇಮಿಂಗ್ ಕ್ಷೇತ್ರದಲ್ಲಿ ಅವಕಾಶಗಳು' ಕುರಿತು ಉಪನ್ಯಾಸ ನೀಡಿದ ಬೆಂಗಳೂರು ಅನಿಮೇಷನ್ ಉದ್ಯಮ ಸಂಘಗಳ ಉಪಾಧ್ಯಕ್ಷ ಎಂ.ಆರ್.ಬಾಲಕೃಷ್ಣ, 'ಅರ್ಧ ದಶಕದಿಂದ ಅನಿಮೇಷನ್ ಕ್ಷೇತ್ರದಲ್ಲಿ ವ್ಯಾಪಕ ಉದ್ಯೋಗಾವಕಾಶ ಸೃಷ್ಟಿಯಾಗಿದೆ' ಎಂದರು.

ಪದವಿಪೂರ್ವ ಶಿಕ್ಷಣ ಇಲಾಖೆಯ ನರಸಿಂಹಮೂರ್ತಿ ಸಿಇಟಿ ಬಗ್ಗೆ ಮಾಹಿತಿ ನೀಡಿದರು.



'ಪ್ರಜಾವಾಣಿ' ಮತ್ತು 'ಡೆಕ್ಕನ್ ಹೆರಾಲ್ಡ್' ಪತ್ರಿಕಾ ಸಮೂಹದ ಆಶ್ರಯದಲ್ಲಿ ನಗರದ ಅರಮನೆ ಮೈದಾನದಲ್ಲಿ ಭಾನುವಾರ ನಡೆದ 'ಜ್ಞಾನ ದೇಗುಲ' ಶಿಕ್ಷಣ ಮೇಳದಲ್ಲಿ ಪಾಲ್ಗೊಂಡ ಪೋಷಕರು ಹಾಗೂ ವಿದ್ಯಾರ್ಥಿಗಳು. -ಪ್ರಜಾವಾಣಿ ಚಿತ್ರ



ಶೇಷಾದ್ರಿಪುರ ಶಿಕ್ಷಣ ಸಮೂಹದ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ



ಬೆಂಗಳೂರು ಅನಿಮೇಷನ್ ಉದ್ಯಮ ಸಂಘಗಳ ಉಪಾಧ್ಯಕ್ಷ ಎಂ.ಆರ್. ಬಾಲಕೃಷ್ಣ

## ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಆನ್‌ಲೈನ್ ವ್ಯವಸ್ಥೆ: ರಶ್ಮಿ

'ವಿದ್ಯಾರ್ಥಿಗಳ ಅಲೆದಾಟ ತಪ್ಪಿಸಿ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಸಿಇಟಿ ಆಯ್ಕೆ ಪ್ರಕ್ರಿಯೆಯಲ್ಲಿ ಆನ್‌ಲೈನ್ ಜಾರಿಗೆ ತರಲಾಗಿದೆ' ಎಂದು ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರಾದ ವಿ.ರಶ್ಮಿ ತಿಳಿಸಿದರು.

'ಸಿಇಟಿ ನಿಯಮಗಳು' ಕುರಿತು ಉಪನ್ಯಾಸ ನೀಡಿದ ಅವರು, 'ವಿದ್ಯಾರ್ಥಿಗಳಿಗೆ ಗೊಂದಲ ಮೂಡಿದಾಗ ಇಲಾಖೆಯ ಜೊತೆಗೆ ಸಂವಹನ ನಡೆಸಿ ಸಂಶಯ ಪರಿಹರಿಸಿಕೊಳ್ಳಬಹುದು. ವೆಬ್‌ಸೈಟ್‌ಗೆ ಭೇಟಿ ನೀಡಿ ಮಾಹಿತಿ ಪಡೆಯಬಹುದು. ಫೇಸ್ ಬುಕ್ ಮೂಲಕ ಇಲಾಖೆಯ ಅಧಿಕಾರಿಗಳ ಜೊತೆಗೆ ಸಂವಹನ ನಡೆಸಬಹುದು. ಕೈಪಿಡಿಯಲ್ಲಿ ಎಲ್ಲ ಮಾಹಿತಿಯೂ ಲಭ್ಯವಿದೆ' ಎಂದರು.



ವಿ.ರಶ್ಮಿ

'ಕಳೆದ ವರ್ಷ ಕೆಲವು ವಿದ್ಯಾರ್ಥಿಗಳು ಹಾಗೂ ಪೋಷಕರು ಸಿಇಟಿ ಪ್ರಕ್ರಿಯೆ ವೇಳೆಗೆ 10ಕ್ಕೂ ಅಧಿಕ ಬಾರಿ ಅಲೆದಾಡಿದ ಉದಾಹರಣೆಗಳು ಇವೆ. ಈ ಬಾರಿ ಪರಿಶೀಲನೆ ವೇಳೆಗೆ ಒಂದು ಬಾರಿ ಹಾಜರಾದರೆ ಸಾಕು. ಬಳಿಕ ಆನ್‌ಲೈನ್ ಮೂಲಕವೇ ಪರಿಶೀಲನೆ ಪ್ರಕ್ರಿಯೆ ಮುಂದುವರಿಯುತ್ತದೆ' ಎಂದು ಅವರು ಮಾಹಿತಿ ನೀಡಿದರು.

'ಕಳೆದ ವರ್ಷ ಹಲವು ವಿದ್ಯಾರ್ಥಿಗಳು ಎಂಜಿನಿಯರಿಂಗ್ ಹಾಗೂ ವೈದ್ಯಕೀಯ ಎರಡನ್ನೂ ಆಯ್ಕೆ ಮಾಡಿಕೊಂಡು ಸಮಸ್ಯೆ ಸೃಷ್ಟಿಸಿಕೊಂಡಿದ್ದರು. ಪಿಯುಸಿ ಫಲಿತಾಂಶ ಪ್ರಕಟಗೊಂಡ ಬಳಿಕ ಸಿಇಟಿಗೆ ಸಾಕಷ್ಟು ಕಾಲಾವಕಾಶ ಇದ್ದು; ಈ ಅವಧಿಯಲ್ಲಿ ವಿದ್ಯಾರ್ಥಿಗಳು ಕಾಲೇಜುಗಳು ಹಾಗೂ ಕೋರ್ಸ್‌ನ ಮಾಹಿತಿ ಪಡೆಯಬೇಕು. ಮತ್ತೆ ಗೊಂದಲಕ್ಕೆ ಒಳಗಾಗುವುದು ಬೇಡ' ಎಂದು ಅವರು ಸಲಹೆ ನೀಡಿದರು.

## ರ‍್ಯಾಂಕ್ ಪಡೆಯುವುದೇ ಸಾಧನೆಯಲ್ಲ: ಬಿ.ಎಂ.ಹೆಗ್ಡೆ



ಪ್ರೊ. ಬಿ.ಎಂ.ಹೆಗ್ಡೆ

'ಹೆಚ್ಚು ಅಂಕ, ರ‍್ಯಾಂಕ್ ಪಡೆಯುವುದೇ ದೊಡ್ಡ ಸಾಧನೆ ಅಲ್ಲ. ಇತರರನ್ನು ಅರ್ಥ ಮಾಡಿಕೊಂಡು ಅವರ ನೋವಿಗೆ ಸ್ಪಂದಿಸುವ ಶಿಕ್ಷಣ ದೊರಕಬೇಕು' ಎಂದು ವೈದ್ಯಕೀಯ ಲೇಖಕ ಡಾ. ಬಿ.ಎಂ. ಹೆಗ್ಡೆ ತಿಳಿಸಿದರು.

'ವೃತ್ತಿ ಮಾರ್ಗದರ್ಶನ' ಕುರಿತು ಅವರು ಉಪನ್ಯಾಸ ನೀಡಿ, 'ಶೇ 100 ಅಂಕ ಪಡೆದ ವಿದ್ಯಾರ್ಥಿಗಳಿಗೆ ಭವಿಷ್ಯದಲ್ಲಿ ಹೆಚ್ಚು ಅಂಕ ಗಳಿಸಲು ಅವಕಾಶಗಳು ಇರುವುದಿಲ್ಲ. ಪ್ರಥಮ ದರ್ಜೆಯಲ್ಲಿ ಕಲಿತ ವಿದ್ಯಾರ್ಥಿಗಳಿಗೆ ಮುಂದಿನ ದಿನಗಳಲ್ಲಿ ಹೆಚ್ಚು ಅಂಕ ಗಳಿಸಲು ಬಾಗಿಲು ತೆರೆದಿಯತ್ತದೆ. ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಜೀವನದ ಯಶಸ್ಸು ಅಲ್ಲ' ಎಂದು ಅಭಿಪ್ರಾಯಪಟ್ಟರು.

'ತಂದೆ- ತಾಯಿಯನ್ನು ವೃದ್ಧಾಶ್ರಮಕ್ಕೆ ಸೇರಿಸುವುದು ಭಾರತೀಯ ಸಂಸ್ಕೃತಿ ಅಲ್ಲ. ಜೀವನದಲ್ಲಿ ನೈತಿಕತೆ ಅಳವಡಿಸಿಕೊಳ್ಳಬೇಕು' ಎಂದು ಅವರು ಸಲಹೆ ನೀಡಿದರು.

ವಿಜಯ ಕರ್ನಾಟಕ
ಭಾನುವಾರ,26 ಮೇ 2013, ಬೆಂಗಳೂರು

# ಜನಮೆಚ್ಚುವ ಆಡಳಿತ ನೀಡಿ: ದೊರೆಸ್ವಾಮಿ

■ ವಿಕ ಸುದ್ದಿಲೋಕ ಬೆಂಗಳೂರು

ಜನ ಮೆಚ್ಚುಗೆ ಪಡೆದು ಅಧಿಕಾರಕ್ಕೆ ಬಂದಿದ್ದೇವೆಂದು ಕಾಂಗ್ರೆಸ್ ಬೀಗುವ ಅಗತ್ಯವಿಲ್ಲ. ರಾಜ್ಯದಲ್ಲಿ ಬಿಜೆಪಿ ಸರಕಾರದ ಭ್ರಷ್ಟಾಚಾರದಿಂದ ಮತದಾರ ಬೇಸತ್ತು ತಮಗೆ ಮತ ಹಾಕಿ, ಭ್ರಷ್ಟ ಮುಕ್ತ ಆಡಳಿತ ನೀಡುತ್ತೀರೆಂದು ಅಪೇಕ್ಷೆ ಪಟ್ಟಿದ್ದಾರೆ. ಅವರ ನಂಬಿಕೆ ಉಳಿಸುವಂತೆ ನಡೆದುಕೊಳ್ಳಿ ಎಂದು ಸ್ವಾತಂತ್ರ್ಯ ಹೋರಾಟ ಗಾರ ಎಚ್.ಎಸ್. ದೊರೆಸ್ವಾಮಿ ಎಚ್ಚರಿಸಿದರು.

ಸ್ವಾಭಿಮಾನಿ ಕರ್ನಾಟಕ ವೇದಿಕೆಯು ನಗರದ ಕಾರ್ಯನಿರತ ಪತ್ರಕರ್ತರ ಸಂಘದ ಸಭಾಂಗಣದಲ್ಲಿ ಏರ್ಪಡಿಸಿದ್ದ 'ನೂತನ ಸರಕಾರ ಮತ್ತು ಕನ್ನಡ ಸವಾಲುಗಳು' ಚಿಂತನಾಗೋಷ್ಠಿಯಲ್ಲಿ ಮಾತನಾಡಿದ ಅವರು ಡಿದರು.

''ಸರಕಾರ ಜನರ ಮನಸ್ಸಿನಿಂದ ಗೆದ್ದಿದೆ, ಜನ ಮೆಚ್ಚಿ ಮತ ಹಾಕಿದ್ದಾರೆ ಎಂದು ನಾನೇನೂ ಭಾವಿಸಿಲ್ಲ. ಈ ಭ್ರಮೆಯಲ್ಲಿ ಸರಕಾರವೂ ಇರುವುದು ಬೇಡ. ಭ್ರಷ್ಟಾಚಾರ ಮತ್ತೆ ರಾಜ್ಯದಲ್ಲಿ ತಲೆ ಎತ್ತದಂತೆ ಆಡಳಿತ ನಡೆಸಿ. ಮಕ್ಕಳಿಗೆ ಪೌಷ್ಟಿಕ ಆಹಾರ ನೀಡಿ, ಆಹಾರ ಶೇಖರಣೆಗಾಗಿ ತಾಲೂಕಿಗೊಂದು ಉಗ್ರಾಣ ಸ್ಥಾಪಿಸಿ,'' ಎಂದು ಸಲಹೆ ನೀಡಿದರು.



''ಕೇಂದ್ರ ಸರ ಕಾರ ಭ್ರಷ್ಟಾಚಾರದಲ್ಲಿ ಮುಳುಗಿದೆ. ದೇಶದ ಪ್ರಧಾನಿ ಸಾತ್ವಿಕರಿರಬಹುದು, ಆದರೆ ಸಹೋದ್ಯೋಗಿ ಗಳನ್ನು ಹತೋಟಿ ಮಾಡುವ ತಾಕತ್ತು ಅವರಿಗಿಲ್ಲ ಎಂದ ಮೇಲೆ ಅವರೆಂತಹ ನಾಯಕರು,'' ಎಂದು ಕಿಡಿ ಕಾರಿದರು. ಶೇಷಾದ್ರಿಪುರ ಶಿಕ್ಷಣ ದತ್ತಿಯ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ ಮಾತನಾಡಿ ''ಜನಪ್ರತಿನಿಧಿಗಳಿಗೆ ಅಧಿಕಾರ ಬಂದಾಗ ಹೋರಾಟದ ಸಹೋ ದ್ಯೋಗಿಗಳನ್ನು ಮರೆಯಬಾರದು. ಸಚಿವರು ಚಿಂತನಾಶೀಲ ರಾಗಿ ಕೆಲಸ ಮಾಡಬೇಕು,'' ಎಂದರು.

ವೇದಿಕೆಯ ಅಧ್ಯಕ್ಷ ದ್ವಾರನಕುಂಟೆ ಪಾತಣ್ಣ ಕಾರ್ಯದರ್ಶಿ ಹನುಮಂತ ರಾಯ ಮತ್ತು ಕನ್ನಡ ಯುವ ಜನ ಸಂಘದ ಅಧ್ಯಕ್ಷ ಜಗದೀಶ್ ರೆಡ್ಡಿ ಪಾಲ್ಗೊಂಡಿದ್ದರು.

ವಿಜಯವಾಣಿ
ಶನಿವಾರ 25 ಮೇ 2013



## ಚಿಂತನಾ ಗೋಷ್ಠಿ..

ಸ್ವಾಭಿಮಾನಿ ಕರ್ನಾಟಕ ವೇದಿಕೆಯು ಕಾರ್ಯನಿರತ ಪತ್ರಕರ್ತರ ಸಂಘದ ಸಭಾಂಗಣದಲ್ಲಿ ಚಿಂತನಗೋಷ್ಠಿಗೆ ಸ್ವಾತಂತ್ರ್ಯ ಹೋರಾಟಗಾರ ದೊರೆಸ್ವಾಮಿ ಚಾಲನೆ ನೀಡಿದರು.

ಈ ಸಂಜೆ

ಶುಕ್ರವಾರ, 24 ಮೇ 2013



ನವದೆಹಲಿಯಲ್ಲಿ ಇತ್ತೀಚೆಗೆ ನಡೆದ ರೆಡ್ ಕ್ರಾಸ್ ವಾರ್ಷಿಕ ಸಮ್ಮೇಳನದಲ್ಲಿ ಬೆಂಗಳೂರಿನ ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಅವರಿಗೆ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಸ್ಮರಣಿಕೆ ನೀಡಿ ಸನ್ಮಾನಿಸಿದರು. ಆರೋಗ್ಯ ಸಚಿವ ಗುಲಾಂನಬಿ ಅಜಾದ್ ಹಾಜರಿದ್ದರು.

| ಸಂಯುಕ್ತ ಕರ್ನಾಟಕ | ದಾವಣಗೆರೆ | ಮೇ 17 | 2013

## ಚಿತ್ರದುರ್ಗ



ಆಂಧ್ರಪ್ರದೇಶ ವಲಸೆ ಗ್ರಾಮದಲ್ಲಿ ಆಂಧ್ರ ಗಡಿನಾಡು ಟಕದಿಂದ ಆಯೋಜಿಸಿದ್ದ ತೃತೀಯ ಕನ್ನಡ ಸಾಹಿತ್ಯ ಮ್ಮೇಳನದಲ್ಲಿ ಭಾಗವಹಿಸಿದ್ದ ಜನರು.

# ಡಿನಾಡಿನಲ್ಲಿ ಕನ್ನಡದ ಕಲರವ

ಪರಶುರಾಮಪುರ, ಮೇ 16 : ಅದು, ಆಂಧ್ರಪ್ರದೇಶಕ್ಕೆ ೀರಿದ ಗ್ರಾಮ. ಆದರೆ, ಕರ್ನಾಟಕ ಗಡಿಯಲ್ಲಿರುವ ಪ್ರದೇಶ. ಲ್ಲಿರುವವರೆಲ್ಲರೂ ಕನ್ನಡಿಗರೇ...ಇಂತಹ ಪರಿಸ್ಥಿತಿ ೊಂದಿರುವ ಗ್ರಾಮದಲ್ಲಿ ಗುರುವಾರ ಕನ್ನಡದ ಘೋಷಣೆ ುಗಿಲು ಮುಟ್ಟಿತ್ತು. ಗಡಿನಾಡಿನಲ್ಲಿ ಕನ್ನಡದ ಕಂಪು ರ(

ಇದು, ಆಂಧ್ರಪ್ರದೇಶದ ವಲಸೆ ಗ್ರಾಮದಲ್ಲಿ ಕಂಡು ಂದ ಸನ್ನಿವೇಶ. ವಲಸೆ ಗ್ರಾಮದಲ್ಲಿ ಆಂಧ್ರ ಗಡಿನಾಡು ಟಕದ ತೃತೀಯ ಕನ್ನಡ ಸಾಹಿತ್ಯ ಸಮ್ಮೇಳನ ಆಯೋಜನೆ ಂದರ್ಭದಲ್ಲಿ ಕನ್ನಡದ ಮಕ್ಕಳು ಕುಣಿದು ಕುಪ್ಪಳಿಸುವಂತಹ ಾತಾವರಣ ಸೃಷ್ಟಿಯಾಗಿತ್ತು.

ಕನ್ನಡ ಸಮ್ಮೇಳನವೆಂದರೆ ಕನ್ನಡಿಗರಿಗೆ ಹಬ್ಬವಿದ್ದಂತೆ, ಾಗೆಯೇ ಅದು ನಿಜವಾಗಿತ್ತು. ಸಮ್ಮೇಳನದಲ್ಲಿ ಕನ್ನಡಿಗರು ಂಭ್ರಮದಿಂದ ಭಾಗವಹಿಸಿ ಮಿಂದೆದ್ದರು. ಎಲ್ಲೆಲ್ಲೂ ನ್ನಡದ ಕಂಪು ಪಸರಿತ್ತು. ಗಡಿನಾಡಿನಲ್ಲಿ ಕನ್ನಡದ ಕಲರವ ುಗಿಲು ಮುಟ್ಟಿತ್ತು.



ಆಂಧ್ರಪ್ರದೇಶ ವಲಸೆ ಗ್ರಾಮದಲ್ಲಿ ಆಂಧ್ರ ಗಡಿನಾಡು ಘಟಕದಿಂದ ಆಯೋಜಿಸಿದ್ದ ತೃತೀಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿದರು.

# ಗಡಿನಾಡಿನಲ್ಲಿ ಕನ್ನಡ ಶಾಲೆ ಆರಂಭಿಸಿ

ಪರಶುರಾಮಪುರ, ಮೇ 16 : ಗಡಿನಾಡಲ್ಲಿ ಕನ್ನಡದ ಕಂಪು ಬಿತ್ತುವಲ್ಲಿ ಕನ್ನಡ ಶಾಲೆಗಳ ಪಾತ್ರ ಬಹುಮುಖ್ಯವಾಗಿದೆ. ಹೀಗಾಗಿ ಕರ್ನಾಟಕ ಮತ್ತು ಆಂಧ್ರ ಪ್ರದೇಶ ಸರ್ಕಾರಗಳು ಶಾಲೆಗಳ ಪ್ರಾರಂಭಕ್ಕೆ ಇರುವ ಸಮಸ್ಯೆಯನ್ನು ಬಗೆಹರಿಸಿ ಈ ಭಾಗದ ಜನರಿಗೆ ನ್ಯಾಯ ದೊರಕಿಸಿ ಕೊಡಬೇಕು ಎಂದು ಸಮ್ಮೇಳನಾಧ್ಯಕ್ಷ ಡಾ. ವೀರಸಾಭಿಹಳ್ಳಿ ಶಿವಣ್ಣ ಹೇಳಿದರು.

ಆಂಧ್ರಪ್ರದೇಶದ ವಲಸೆ ಗ್ರಾಮದಲ್ಲಿ ಆಂಧ್ರ ಗಡಿನಾಡು ಘಟಕ ಆಯೋಜಿಸಿದ್ದ ತೃತೀಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅವರು ಮಾತನಾಡಿದರು.

ಆಂಧ್ರದೊಳೊಂದು ಅಚ್ಚಕನ್ನಡ ಸೀಮೆಯಾಗಿಯೇ ಉಳಿದಿರುವ ಮಡಕಶಿರ ತಾಲ್ಲೂಕು ಅತೀ ಹೆಚ್ಚು ಕನ್ನಡಿಗರನ್ನು ಒಳಗೊಂಡಿರುವ ಪ್ರದೇಶ. ಆದರೂ ಅದು ಆಂಧ್ರಪ್ರದೇಶಕ್ಕೆ ಸೇರಿದೆ. ಇತ್ತ ಕನ್ನಡವೂ ಅಲ್ಲ, ಅತ್ತ ತೆಲಗೂ ಅಲ್ಲ. ಎರಡು ಸರ್ಕಾರಗಳಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಇಂತಹ ಗಡಿಭಾಗದಲ್ಲಿರುವ ಪ್ರದೇಶಗಳ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸರ್ಕಾರಗಳು ಮುಂದಾಗಬೇಕು ಎಂದು ಹೇಳಿದರು.

ರಾಷ್ಟ್ರಪತಿ ಪದಕ ವಿಜೇತ ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿ, ಕನ್ನಡ ಸಾಹಿತ್ಯ ಸಮ್ಮೇಳನ ಗಡಿಭಾಗದಲ್ಲಿ ನಡೆಯುತ್ತಿರುವುದು ಕನ್ನಡಿಗರು [illegible] ಜೊತೆಗೆ ಅನ್ಯ ಭಾಷಿಕರ ಜೊತೆಗೆ ಶಾಂತಿ ಸಹಬಾಳ್ವೆಯಿಂದ ಜೀವನ ನಡೆಸಲು ಅನುವು ಮಾಡಿಕೊಡುವುದು ಪ್ರತಿಯೊಬ್ಬ ಕನ್ನಡಿಗರ ಕರ್ತವ್ಯವಾಗಿದೆ ಎಂದರು.

ಕನ್ನಡ ಸಾಹಿತ್ಯ ಪರಿಷತ್ ಆಂಧ್ರ ಘಟಕದ ಅಧ್ಯಕ್ಷ ಹೆಚ್.ವಿ.ಶಿವಕುಮಾರ್ ಪ್ರಸ್ತಾವಿಕವಾಗಿ ಮಾತನಾಡಿ ಪ್ರಾಚೀನ ಕಾಲದಿಂದಲೂ ತೆಲಗು ಮತ್ತು ಕನ್ನಡ ಭಾಷೆಯ ಮಧ್ಯೆ ಆರೋಗ್ಯಕರವಾದ ಸಂಬಂಧವಿದೆ, ವೈವಾಹಿಕ, ವ್ಯವಹಾರಿಕವಾಗಿ ಜನರು ಎಂದೂ ಜಗಳವಾಡದೆ ಉತ್ತಮವಾದ ಬಾಂಧವ್ಯವನ್ನು ಹೊಂದಿದ್ದಾರೆ. ಆದರೆ ಶಿಕ್ಷಣ ಮಾತ್ರ ಗಡಿಭಾಗದ ಜ್ವಲಂತ ಸಮಸ್ಯೆಯಾಗಿದೆ. ಇದನ್ನು ಪರಿಹರಿಸುವಲ್ಲಿ ಎರಡು ಸರ್ಕಾರಗಳು ಕಾರ್ಯೋನ್ಮುಖವಾಗಬೇಕಿದೆ ಎಂದರು.

ಇದೇ ಸಂದರ್ಭದಲ್ಲಿ ಸಮ್ಮೇಳನದ ಸ್ಮರಣ ಸಂಚಿಕೆ ಚಿತ್ರಗಿರಿ ಎಂಬ ಹೆಸರಿನ ಪುಸ್ತಕ ಮತ್ತು ವೂಡೇ ಪಿ.ಕೃಷ್ಣ ಅವರು ಬರೆದಿರುವ ಸರ್.ಎಂ. ವಿಶ್ವೇಶ್ವರಯ್ಯ ಜೀವನ ಸಾಧನೆ ಎಂಬ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು.

ಆಂಧ್ರ ಘಟಕದ ಅಧ್ಯಕ್ಷ ಹೆಚ್.ರಾಮಚಂದ್ರಪ್ಪ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಸಾಹಿತಿಗಳಾದ ತಿಪ್ಪಣ್ಣ ಮರಿಕುಂಟೆ, ಚಿಕ್ಕಣ್ಣ ಎಣ್ಣೆಕಟ್ಟೆ, ಜಯದೇವಮೂರ್ತಿ, ದೇವರಾಜ, ಜಯಶಂಕರ್, ಕಂಕೇರಿ ಹನುಮಂತಗೌಡ, ಆನಂದಪ್ಪ, [illegible]

ಪ್ರಜಾವಾಣಿ ಗುರುವಾರ 2ನೇ ಮೇ 2013

# ವೂಡೇಗೆ ರಾಷ್ಟ್ರಪತಿ ಚಿನ್ನದ ಪದಕ

ಯಲಹಂಕ: ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ಗಣನೀಯ ಸೇವೆಗಾಗಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಅವರು 2011-12ನೇ ಸಾಲಿನ ರಾಷ್ಟ್ರಪತಿ ಚಿನ್ನದ ಪದಕ ಪಡೆದಿದ್ದಾರೆ.



ವೂಡೇ ಪಿ.ಕೃಷ್ಣ

ಇದೇ 3ರಂದು ರಾಷ್ಟ್ರಪತಿ ಭವನದಲ್ಲಿ ನಡೆಯಲಿರುವ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾರಂಭದಲ್ಲಿ ರಾಷ್ಟ್ರಪತಿ ಪ್ರಣವ್ ಮುಖರ್ಜಿ ಅವರು ಪದಕ ಪ್ರದಾನ ಮಾಡುವರು.

1984ರಲ್ಲಿ ರೆಡ್‌ಕ್ರಾಸ್ ಸಂಸ್ಥೆಯಲ್ಲಿ ಸ್ವಯಂಸೇವಕರಾಗಿ ಸೇರ್ಪಡೆಗೊಂಡ ಅವರು, ರಾಜ್ಯ ಶಾಖೆಯ ಕೋಶಾಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಹಾಗೂ ರಾಷ್ಟ್ರೀಯ ಕಾರ್ಯಕಾರಿಣಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಸಂಜೆವಾಣಿ
ಸೋಮವಾರ 6 ಮೇ 2013

# ಡಾ. ಕೃಷ್ಣರಿಗೆ ರಾಷ್ಟ್ರಪತಿ ಚಿನ್ನದ ಪದಕ

ತುಮಕೂರು, ಮೇ ೬– ಶಿಕ್ಷಣ ತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ತಮ್ಮ ವಿಶಿಷ್ಟ ಸೇವೆಗಾಗಿ 2012 ನೇ ಸಾಲಿನ ಪ್ರತಿಷ್ಠಿತ ರಾಷ್ಟ್ರಪತಿ ಚಿನ್ನದ ಪದಕ ಪಡೆದಿದ್ದಾರೆ.

ರಾಷ್ಟ್ರಪತಿ ಭವನದಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾವೇಶದಲ್ಲಿ ರಾಷ್ಟ್ರಪತಿ ಪ್ರಣಬ್‌ಮುಖರ್ಜಿ ಅವರು ಪದಕ ಪ್ರದಾನ ಮಾಡಲಿದ್ದಾರೆ.

1984 ರಲ್ಲಿ ಸ್ವಯಂ ಸೇವಕರಾಗಿ ಸೇರ್ಪಡೆಗೊಂಡ ಡಾ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಗೌರವಕೋಶಾಧ್ಯಕ್ಷರಾಗಿ ಹಾಗೂ ರಾಷ್ಟ್ರೀಯ ಕಾರ್ಯಕಾರಿಣಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಡಾ.ಕೃಷ್ಣ ಅವರು ಸಲ್ಲಿಸಿದ ಸೇವೆಗೆ 2002 ರ ಕೆಂಪೇಗೌಡ ಪ್ರಶಸ್ತಿ, 2004ರ ರಾಜ್ಯೋತ್ಸವ ಪ್ರಶಸ್ತಿ, 2008 ರ ವಿಕಲಚೇತನ ಕಲ್ಯಾಣಾಭಿವೃದ್ಧಿ ರಾಜ್ಯ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳು ಸಂದಿವೆ.

'ಪ್ರಜಾಪ್ರಗತಿ' ಕನ್ನಡ ದಿನಪತ್ರಿಕೆ 01 ಮೇ 2013 ಬುಧವಾರ

# ವೂಡೇ ಪಿ. ಕೃಷ್ಣಗೆ ರಾಷ್ಟ್ರಪತಿ ಚಿನ್ನದ ಪದಕ

ತುಮಕೂರು

ಶಿಕ್ಷಣ ತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ತಮ್ಮ ವಿಶಿಷ್ಟ ಸೇವೆಗಾಗಿ 2012 ನೇ ಸಾಲಿನ ಪ್ರತಿಷ್ಠಿತ ರಾಷ್ಟ್ರಪತಿ ಚಿನ್ನದ ಪದಕ ಪಡೆದಿದ್ದಾರೆ.

ತಾರೀಖು 3ನೇ ಮೇ 2013 ರಂದು ರಾಷ್ಟ್ರಪತಿ ಭವನದಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾವೇಶದಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಅವರು ಪದಕ ಪ್ರದಾನ ಮಾಡಲಿದ್ದಾರೆ.

1984 ರಲ್ಲಿ ಸ್ವಯಂಸೇವಕರಾಗಿ ಸೇರ್ಪಡೆಗೊಂಡ ಡಾ. ಕೃಷ್ಣ ಅವರು ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಗೌರವಕೋಶಾಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಹಾಗೂ ರಾಷ್ಟ್ರೀಯ ಕಾರ್ಯಕಾರಿಣಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಡಾ. ಕೃಷ್ಣ ಅವರು ಸಲ್ಲಿಸಿದ ಸಮಾಜ ಸೇವೆಗೆ 2002 ರ ಕೆಂಪೇಗೌಡ ಪ್ರಶಸ್ತಿ, 2008ರ ವಿಕಲಚೇತನಕಲ್ಯಾಣಾಭಿವೃದ್ಧಿ ರಾಜ್ಯ ಪ್ರಶಸ್ತಿ ಹಾಗೂ 2004ರ ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳು ಸಂದಿವೆ.



ಕನ್ನಡಪ್ರಭ
ಬೆಂಗಳೂರು । ಶನಿವಾರ 27 ಏಪ್ರಿಲ್ 2013

# ವೂಡೇ ಪಿ.ಕೃಷ್ಣಗೆ ರಾಷ್ಟ್ರಪತಿ ಪದಕ

ಶಿಕ್ಷಣ ತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿ



ಸಿದ ಸೇವೆಗೆ 2011-12ನೇ ಸಾಲಿನ ಪ್ರತಿಷ್ಠಿತ ರಾಷ್ಟ್ರಪತಿಗಳ ಚಿನ್ನದ ಪದಕ ಪಡೆದಿದ್ದಾರೆ. ಮೇ 3ರಂದು ರಾಷ್ಟ್ರಪತಿ ಭವನದಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾರಂಭದಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಪದಕ ಪ್ರದಾನ ಮಾಡಲಿದ್ದಾರೆ. 1984ರಲ್ಲಿ ಸ್ವಯಂ ಸೇವಕರಾಗಿ ಸೇರ್ಪಡೆಗೊಂಡ ಡಾ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಹಾಗೂ ರಾಷ್ಟ್ರೀಯ ಕಾರ್ಯಕಾರಿಣಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಡಾ.ಕೃಷ್ಣ ಅವರು ಸಲ್ಲಿಸಿದ ಸಮಾಜ ಸೇವೆಗೆ 2002ರ ಕೆಂಪೇಗೌಡ ಪ್ರಶಸ್ತಿ, 2008ರ ವಿಕಲಚೇತನ ಕಲ್ಯಾಣಾಭಿವೃದ್ಧಿ ರಾಜ್ಯ ಪ್ರಶಸ್ತಿ ಹಾಗೂ 2004ರ ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳು ಸಂದಿವೆ.

ವಿಜಯವಾಣಿ
ಶನಿವಾರ ● 27 ಏಪ್ರಿಲ್ 2013

# ವೂಡೆ ಕೃಷ್ಣಗೆ ರಾಷ್ಟ್ರಪತಿ ಪದಕ

**ಬೆಂಗಳೂರು:** ರಾಜ್ಯದಲ್ಲಿ ರೆಡ್ ಕ್ರಾಸ್ ಸಂಸ್ಥೆಯ ಪ್ರಚಾರಕ್ಕಾಗಿ ಶ್ರಮಿಸುತ್ತಿರುವ ಶಿಕ್ಷಣ ತಜ್ಞ, ಶೇಷಾದ್ರಿಪುರಂ



ಶಿಕ್ಷಣ ಸಂಸ್ಥೆಗಳ ಗೌರವ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ರಾಷ್ಟ್ರಪತಿಗಳ ಚಿನ್ನದ ಪದಕ ಗೌರವಕ್ಕೆ ಪಾತ್ರರಾಗಿದ್ದಾರೆ. ಮೇ 3ರಂದು ನವದೆಹಲಿಯಲ್ಲಿ ನಡೆಯಲಿರುವ ಐಆರ್‌ಸಿಎಸ್‌ನ ವಾರ್ಷಿಕ ಮಹಾಸಭೆಯ ಸಂದರ್ಭದಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಅವರು ಕೃಷ್ಣ ಅವರಿಗೆ ಬಂಗಾರದ ಪದಕವನ್ನು ಪ್ರದಾನ ಮಾಡಲಿದ್ದಾರೆ. 1984ರಿಂದ ರೆಡ್ ಕ್ರಾಸ್‌ನ ಸ್ವಯಂ ಸೇವಕರಾಗಿ ನಾನಾ ಸ್ಥಾನಗಳಲ್ಲಿ ವೂಡೆ ಕೃಷ್ಣ ನಿಸ್ಪೃಹ ಸೇವೆ ಸಲ್ಲಿಸಿದ್ದಾರೆ.

ಸಂಯುಕ್ತ ಕರ್ನಾಟಕ | ಏಪ್ರಿಲ್ | 25 | 2013

# ವೂಡೇ ಪಿ. ಕೃಷ್ಣಗೆ ರಾಷ್ಟ್ರಪತಿ ಪದಕ

ಬೆಂಗಳೂರು, ಏ. 24: ಶಿಕ್ಷಣ ತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ



ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ವಿಶಿಷ್ಟ ಸೇವೆಗೆ 2011-12ನೇ ಸಾಲಿನ ರಾಷ್ಟ್ರಪತಿಗಳ ಚಿನ್ನದ ಪದಕಕ್ಕೆ ಭಾಜನರಾಗಿದ್ದಾರೆ.

ಮೇ 3 ರಂದು ರಾಷ್ಟ್ರಪತಿ ಭವನದಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾರಂಭದಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಪದಕ ಪ್ರದಾನ ಮಾಡಲಿದ್ದಾರೆ.

1984ರಲ್ಲಿ ಸ್ವಯಂಸೇವಕರಾಗಿ ಸೇರ್ಪಡೆಗೊಂಡ ಡಾ. ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಹಾಗೂ ರಾಷ್ಟ್ರೀಯ ಕಾರ್ಯಕಾರಣಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ವಿಜಯ ಕರ್ನಾಟಕ
ಗುರುವಾರ,25 ಏಪ್ರಿಲ್ 2013, ಬೆಂಗಳೂರು

# ಜನಪ್ರತಿನಿಧಿಗಳೆದುರು ಜನರ ಮುಖಾಮುಖಿ




'ಜನರೆದುರು ಜನಪ್ರತಿನಿಧಿ' ಕಾರ್ಯಕ್ರಮ ಕುರಿತ ಸುದ್ದಿಗೋಷ್ಠಿಯಲ್ಲಿ ವೈ.ಕೆ. ಮುದ್ದುಕೃಷ್ಣ, ಡಾ. ಡಬ್ಲ್ಯು.ಪಿ. ಕೃಷ್ಣ, ಶ್ರೀನಿವಾಸ್ ಜಿ. ಕಪ್ಪಣ್ಣ ಮತ್ತಿತರರು ಪಾಲ್ಗೊಂಡಿದ್ದರು.

**ವಿಕ ಸುದ್ದಿಲೋಕ** ಬೆಂಗಳೂರು

ನಗರದ ನಾಗರಿಕರಿಗೆ ಅವಶ್ಯ ಮೂಲ ಸೌಕರ್ಯ ಕಲ್ಪಿಸುವಲ್ಲಿ ಜನಪ್ರತಿನಿಧಿಗಳ ಆಶಯ ಏನು ಎಂಬುದನ್ನು ತಿಳಿಯುವ ಸಲುವಾಗಿ ನಾನಾ ಸಂಘಟನೆಗಳು ಏ.25ರಿಂದ ಮೇ 3ರವರೆಗೆ 'ಜನರೆದುರು ಜನಪ್ರತಿನಿಧಿ' ಶೀರ್ಷಿಕೆಯಡಿ ಜನಪ್ರತಿನಿಧಿಗಳೊಂದಿಗೆ ನಾಗರಿಕರ ಮುಖಾಮುಖಿ ಕಾರ್ಯಕ್ರಮ ಆಯೋಜಿಸಿವೆ.

''ಕುಮಾರಕೃಪಾ ರಸ್ತೆಯಲ್ಲಿರುವ ಗಾಂಧಿ ಭವನದಲ್ಲಿ ಪ್ರತಿದಿನ ಬೆಳಗ್ಗೆ 10.30ಕ್ಕೆ ನಡೆಯುವ ಮುಖಾಮುಖಿ ಕಾರ್ಯಕ್ರಮದಲ್ಲಿ ಕ್ಷೇತ್ರದ ಪ್ರತಿನಿಧಿಗಳು ಜನರ ಪ್ರಶ್ನೆಗಳಿಗೆ ಉತ್ತರಿಸುವರು,'' ಎಂದು ಸಂಘಟಕ ಶ್ರೀನಿವಾಸ್ ಜಿ. ಕಪ್ಪಣ್ಣ ಸುದ್ದಿಗಾರರಿಗೆ ತಿಳಿಸಿದರು.

''ಕುಡಿಯುವ ನೀರು, ಸಾರಿಗೆ, ಶೈಕ್ಷಣಿಕ ವ್ಯವಸ್ಥೆ, ವಸತಿ, ನಿರುದ್ಯೋಗ ನಿವಾರಣೆ... ಇಂತಹ ಹತ್ತಾರು ಸೌಲಭ್ಯಗಳು ಜನರ ಕೈಗೆಟುಕಿದೆಯೇ...? ಇಲ್ಲಿನ ಜನ ಜೀವನ ಸುರಕ್ಷಿತವಾಗಿದೆಯೇ? ಎಂಬ ಹಲವು ಪ್ರಶ್ನೆಗಳು ನಾಗರಿಕರಲ್ಲಿವೆ. ಈ ಸಂದರ್ಭದಲ್ಲಿ ಆಯಾ ಕ್ಷೇತ್ರಗಳ ಜನಪ್ರತಿನಿಧಿಗಳಾಗ ಬಯಸಿರುವ ಆಯಾ ರಾಜಕೀಯ ಪಕ್ಷಗಳ ಅಭ್ಯರ್ಥಿಗಳನ್ನು ಮತದಾರರ ಎದುರು ಮುಖಾಮುಖಿ ಮಾತುಕತೆಗೆ ವೇದಿಕೆ ಕಲ್ಪಿಸುವ ಉದ್ದೇಶ ನಮ್ಮದು,'' ಎಂದರು.

''ಸಿನಿಮಾದಲ್ಲಿದ್ದವರು ಏಕಾಏಕಿ ರಾಜಕೀಯಕ್ಕಿಳಿಯುತ್ತಾರೆ. ನಮ್ಮ ದೇಶದ ಬಗ್ಗೆ ಕಿಂಚಿತ್ತೂ ಅರಿವಿರುವುದಿಲ್ಲ, ಇಂತಹವರಿಂದ ಏನು ನಿರೀಕ್ಷಿಸಲು ಸಾಧ್ಯ? ಹಲವರಿಗೆ ತಾವು ಚುನಾವಣೆಗೆ ಸ್ಪರ್ಧಿಸಿರುವ ಕ್ಷೇತ್ರದ ಬಗ್ಗೆ ಗಂಧ-ಗಾಳಿಯೇ ಗೊತ್ತಿರುವುದಿಲ್ಲ, ಆದರೂ ಚುನಾವಣೆಗೆ ನಿಲ್ಲುತ್ತಾರೆ. ನಂತರ ಅವರ ದರ್ಶನವೇ ಇರುವುದಿಲ್ಲ, ಆದ್ದರಿಂದ ಅನುಭವವುಳ್ಳವರು ಈ ಕ್ಷೇತ್ರಕ್ಕೆ ಬರಬೇಕು. ಅನುಭವವುಳ್ಳ ಸಂಸದರನ್ನೇ ನಾಮನಿರ್ದೇಶನ ಮಾಡಬೇಕು,'' ಎಂದು ಹೊ. ಶ್ರೀನಿವಾಸಯ್ಯ ಆಶಯ ವ್ಯಕ್ತಪಡಿಸಿದರು.

ಕರ್ನಾಟಕ ರಂಗತಂಡಗಳ ಒಕ್ಕೂಟ ಆಯೋಜಿಸಿರುವ ಈ ಕಾರ್ಯಕ್ರಮದಲ್ಲಿ ವೈ.ಕೆ. ಮುದ್ದುಕೃಷ್ಣ ಟಿ. ತಿಮ್ಮೇಶ್, ಜೋಗಿಲ ಸಿದ್ಧರಾಜು, ಡಾ. ಡಬ್ಲ್ಯು.ಪಿ. ಕೃಷ್ಣ ಗಂಗಾಧರ ಮೊದಲಿಯಾರ್ ಮತ್ತಿತರರು ಪಾಲ್ಗೊಂಡಿದ್ದರು.

# ವೂಡೆ ಪಿ.ಕೃಷ್ಣರಿಗೆ ಚಿನ್ನದ ಪದಕ

ಬೆಂಗಳೂರು, ಏ.25- ಶಿಕ್ಷಣ ತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ 2011-12ನೆ ಸಾಲಿನ ಪ್ರತಿಷ್ಠಿತ ರಾಷ್ಟ್ರಪತಿಗಳ ಚಿನ್ನದ ಪದಕ ಪಡೆದಿದ್ದಾರೆ.



ಮೇ 3ರಂದು ರಾಷ್ಟ್ರಪತಿ ಭವನದಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾರಂಭದಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಅವರು ಪದಕ ಪ್ರದಾನ ಮಾಡಲಿದ್ದಾರೆ.

1984ರಲ್ಲಿ ಸ್ವಯಂ ಸೇವಕರಾಗಿ ಸೇರ್ಪಡೆಗೊಂಡ ಡಾ.ಕೃಷ್ಣ ಅವರು ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ , ಉಪಾಧ್ಯಕ್ಷರಾಗಿ ಹಾಗೂ ರಾಷ್ಟ್ರೀಯ ಕಾರ್ಯಕಾರಿಣಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಡಾ.ಕೃಷ್ಣ ಅವರು ಸಲ್ಲಿಸಿದ ಸಮಾಜ ಸೇವೆಗೆ 2002ರ ಕೆಂಪೇಗೌಡ ಪ್ರಶಸ್ತಿ , 2008ರ ವಿಕಲಚೇತನ ಕಲ್ಯಾಣಾಭಿವೃದ್ಧಿ ರಾಜ್ಯ ಪ್ರಶಸ್ತಿ ಹಾಗೂ 2004ರ ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳು ಸಂದಿವೆ.

4
ಉದಯವಾಣಿ ಬೆಂಗಳೂರು
ಗುರುವಾರ | ಏಪ್ರಿಲ್ | 25 | 2013

# ವೂಡೇ ಪಿ. ಕೃಷ್ಣಗೆ ರಾಷ್ಟ್ರಪತಿ ಚಿನ್ನದ ಪದಕ

ಬೆಂಗಳೂರು: ಶಿಕ್ಷಣತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ 2011–12ನೇ ಸಾಲಿನ ಪ್ರತಿಷ್ಠಿತ ರಾಷ್ಟ್ರಪತಿ ಚಿನ್ನದ ಪದಕಕ್ಕೆ ಭಾಜನರಾಗಿದ್ದಾರೆ. ಮೇ 3ರಂದು ರಾಷ್ಟ್ರಪತಿ ಭವನದಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾರಂಭದಲ್ಲಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಅವರು ಪದಕ ಪ್ರದಾನ ಮಾಡಲಿದ್ದಾರೆ. 1984ರಲ್ಲಿ ಸ್ವಯಂ ಸೇವಕರಾಗಿ ಸೇರ್ಪಡೆಗೊಂಡ ಡಾ. ಕೃಷ್ಣ ಅವರು ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಗೌರವ ಕೋಶಾಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ ಹಾಗೂ ರಾಷ್ಟ್ರೀಯ ಕಾರ್ಯಕಾರಿಣಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.



ಸಂಜೆವಾಣಿ
ಗುರುವಾರ 25 ಏಪ್ರಿಲ್ 2013

# ವೂಡೇ ಪಿ. ಕೃಷ್ಣಗೆ ರಾಷ್ಟ್ರಪತಿಗಳ ಸ್ವರ್ಣ ಪದಕ



ಶಿಕ್ಷಣ ತಜ್ಞ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣರವರಿಗೆ 2011-12ನೇ ಸಾಲಿನ ರಾಷ್ಟ್ರಪತಿಗಳ ಚಿನ್ನದ ಪದಕವನ್ನು ಮೇ 3 ರಂದು ನವದೆಹಲಿಯಲ್ಲಿ ನಡೆಯುವ ರೆಡ್‌ಕ್ರಾಸ್ ಸಂಸ್ಥೆಯ ವಾರ್ಷಿಕ ಸಮಾರಂಭದಲ್ಲಿ ನೀಡಿ ಗೌರವಿಸಲಾಗುವುದು.

ಇವರು ರೆಡ್‌ಕ್ರಾಸ್ ಸಂಸ್ಥೆಗೆ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ ಈ ಪದಕ ನೀಡುತ್ತಿದ್ದು, ಅಂದು ರಾಷ್ಟ್ರಪತಿ ಪ್ರಣಬ್ ಮುಖರ್ಜಿರವರು ಪ್ರದಾನ ಮಾಡಲಿದ್ದಾರೆ.

Prajavani dt. 10/04/2013




ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ನಡೆದ ವಾರ್ಷಿಕೋತ್ಸವ ಸಮಾರಂಭದಲ್ಲಿ ವಿದ್ಯಾರ್ಥಿಗಳು ವಿವಿಧ ವೇಷ ಭೂಷಣಗಳನ್ನು ತೊಟ್ಟು ಗಮನ ಸೆಳೆದರು

# ‘ವಿದ್ಯಾರ್ಥಿಗಳು ಕಲಿತ ಸಂಸ್ಥೆಗೆ ಕೀರ್ತಿ ತರಬೇಕು’

ಪ್ರಜಾವಾಣಿ ವಾರ್ತೆ

ಯಲಹಂಕ: ಮಾಜಿ ರಾಷ್ಟ್ರಪತಿ ಡಾ.ಅಬ್ದುಲ್ ಕಲಾಂ ಅವರಂತಹ ಮಹಾನ್ ವ್ಯಕ್ತಿಗಳ ಆದರ್ಶಗಳನ್ನು ಮೈಗೂಡಿಸಿಕೊಂಡು ಸಮಾಜ ಮುಖಿ ಪ್ರಜೆಗಳಾಗಿ ಬೆಳೆಯಬೇಕು ಎಂದು ಕರ್ನಾಟಕ ಪೌರರಕ್ಷಣಾ ದಳದ ಬೆಂಗಳೂರು ಘಟಕದ ಮುಖ್ಯಸ್ಥ ಡಾ.ಪಿ.ಆರ್.ಎಸ್.ಚೇತನ್ ಹೇಳಿದರು.

ಇಲ್ಲಿನ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ವಿದ್ಯಾರ್ಥಿಗಳು ಉತ್ತಮ ವಿದ್ಯಾವಂತರಾಗಿ ಅತ್ಯುನ್ನತ ಹುದ್ದೆಗಳನ್ನು ಅಲಂಕರಿಸುವ ಮೂಲಕ ತಾವು ಕಲಿತ ಶಿಕ್ಷಣ ಸಂಸ್ಥೆಗೆ ಕೀರ್ತಿ ತರಬೇಕು ಎಂದು ಸಲಹೆ ನೀಡಿದರು.

ಕರ್ನಾಟಕ ಪೌರರಕ್ಷಣಾ ದಳಕ್ಕೆ ಸೇರಲು ವಿದ್ಯಾರ್ಥಿಗಳಿಗೆ ವಿಪುಲ ಅವಕಾಶಗಳಿದ್ದು, ಇದನ್ನು ಸದ್ಬಳಕೆ ಮಾಡಿಕೊಂಡರೆ ತಮ್ಮ ಭವಿಷ್ಯವನ್ನು ಉತ್ತಮ ಮಟ್ಟದಲ್ಲಿ ರೂಪಿಸಿಕೊಳ್ಳಲು ಸಹಕಾರಿಯಾಗುತ್ತದೆ ಎಂದರು.

ಶಿಕ್ಷಣ ಸಂಸ್ಥೆಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಅಧ್ಯಕ್ಷತೆ ವಹಿಸಿದ್ದರು.

ಇದೇ ಸಂದರ್ಭದಲ್ಲಿ ಕ್ರೀಡಾ ಮತ್ತು ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ವಿಜೇತರಾದ ಹಾಗೂ ವಿವಿಧ ಪರೀಕ್ಷೆಗಳಲ್ಲಿ ಅತ್ಯುನ್ನತ ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನ ವಿತರಿಸಲಾಯಿತು. ಟ್ರಸ್ಟಿ ಡಬ್ಲ್ಯೂ.ಪಿ ರಾಮಕೃಷ್ಣ, ಪ್ರಾಂಶುಪಾಲರಾದ ಡಾ.ಎಂ ಪ್ರಕಾಶ್, ಡಾ.ಎಸ್.ಎನ್.ವೆಂಕಟೇಶ್, ಸಿಬ್ಬಂದಿ ಕಾರ್ಯದರ್ಶಿ ಡಾ.ವಿ.ಡಿ. ಪೋತ್‌ದಾರ್, ಭೂತಾನ್ ಅಸೋಸಿಯೇಶನ್ ಅಧ್ಯಕ್ಷ ಪ್ರೇಂ ಬಾಂಗೆ ಮೊದಲಾದವರು ಉಪಸ್ಥಿತರಿದ್ದರು. ಸಾಂಸ್ಕೃತಿಕ ಸಂಘದ ಸಂಚಾಲಕಿ ಕೆ.ರಾಜೇಶ್ವರಿ ವಂದಿಸಿದರು.

ಕನ್ನಡಪ್ರಭ

ಬೆಂಗಳೂರು | ಮಂಗಳವಾರ 9 ಏಪ್ರಿಲ್ 2013




ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಆಯೋಜಿಸಿದ್ದ ಪ್ರೊ.ಬಿ.ಆರ್. ನಾರಾಯಣ ಅಯ್ಯರ್ ಸ್ಮಾರಕ ಉಪನ್ಯಾಸ ಕಾರ್ಯಕ್ರಮದಲ್ಲಿ ಡಿವಿಜಿ ಜ್ಞಾನವಾಹಿನಿ ವಿಶೇಷಾಧಿಕಾರಿ ಡಾ.ಕೆ.ಆರ್. ವೇಣುಗೋಪಾಲ್, ಡಾ. ವೂಡೇ ಪಿ. ಕೃಷ್ಣ, ಡಾ.ಪಿ. ವಿಜಯ ಕುಮಾರ್ ಭಾಗವಹಿಸಿದ್ದರು.

ವಿಜಯ ಕರ್ನಾಟಕ
ಭಾನುವಾರ,7 ಏಪ್ರಿಲ್ 2013, ಬೆಂಗಳೂರು

ನಗರ ವಾಸಿಗಳೆಷ್ಟು ಸುರಕ್ಷಿತ?

# ಕಟ್ಟಡ: ನಡೆಯದ ಗುಣಮಟ್ಟ ಪರೀಕ್ಷೆ

ಬಿ. ಎಂ. ಕೀರ್ತಿಪ್ರಸಾದ್, ಬೆಂಗಳೂರು

ಮುಂಬಯಿಯ ಠಾಣೆಯಲ್ಲಿ ನಿರ್ಮಾಣ ಹಂತದ ಬಹುಮಹಡಿ ಕಟ್ಟಡ ಕುಸಿದು 41 ಮಂದಿ ಸಾವನ್ನಪ್ಪಿರುವ ಘಟನೆ ಇಡೀ ದೇಶವನ್ನೇ ಬೆಚ್ಚಿ ಬೀಳಿಸಿದೆ. ಬೆಂಗಳೂರಿನಲ್ಲೂ ಸಾವಿರಾರು ಫ್ಲ್ಯಾಟ್‌ಗಳ ನೂರಾರು ಸಮುಚ್ಚಯಗಳು ನಿರ್ಮಾಣವಾಗುತ್ತಿದ್ದು, ಇವುಗಳ ಗುಣಮಟ್ಟ ತಪಾಸಣೆಗೆ ಸೂಕ್ತ ನಿಯಮವಿಲ್ಲದಿರುವುದು ಅಪಾಯ ತಂದೊಡ್ಡುವ ಆತಂಕ ಸೃಷ್ಟಿಸಿದೆ.

ಬೆಂಗಳೂರಿನಲ್ಲಿ ದಶಕದಿಂದೀಚೆಗೆ ಗಗನ ಚುಂಬಿ ಕಟ್ಟಡಗಳ ನಿರ್ಮಾಣ ಹೆಚ್ಚಾಗಿದೆ. ಭೂಮಿಗೆ ಚಿನ್ನದ ಬೆಲೆ ಬರುತ್ತಿದ್ದಂತೆ ಸಮಾನಾಂತರ ಬೆಳವಣಿಗೆಯನ್ನೂ ಮೀರಿ ಲಂಬಾಂತರ ಅಭಿವೃದ್ಧಿ ಹೆಚ್ಚಾಗಿದೆ. ಡೆವಲಪರ್ ಸಂಸ್ಥೆಗಳು ಪೈಪೋಟಿಗೆ ಬಿದ್ದಂತೆ ಬಹುಮಹಡಿ ಕಟ್ಟಡಗಳನ್ನು ನಿರ್ಮಿಸುತ್ತಿವೆ.

ಆದರೆ ಸಾರ್ವಜನಿಕ ಬಳಕೆಗೆ ನಿರ್ಮಾಣವಾಗುವ ಖಾಸಗಿ ಬಹುಮಹಡಿ ಕಟ್ಟಡಗಳ ಗುಣಮಟ್ಟ ತಪಾಸಣೆಗೆ ಸೂಕ್ತ ವ್ಯವಸ್ಥೆ ಇಲ್ಲ ಎಂಬುದು ಅಚ್ಚರಿ ಮೂಡಿಸಿದರೂ ನಂಬಲೇ ಬೇಕಾದ ಸಂಗತಿ. ಬಿಬಿಎಂಪಿಯಿಂದ ನಕ್ಷೆ ಮಂಜೂರು ಇತರೆ ಅನುಮೋದನೆ ಪಡೆದು ಕಟ್ಟಡ ನಿರ್ಮಾಣ ಕಾರ್ಯ ಆರಂಭಿಸಬಹುದು. ಕಟ್ಟಡ ಪೂರ್ಣಗೊಂಡ ಬಳಿಕ ಆಯ್ದ ಇಲಾಖೆಗಳಿಂದ ನಿರಾಕ್ಷೇಪಣಾ ಪತ್ರ ಪಡೆದು, ಪಾಲಿಕೆಯಿಂದ ಮುಕ್ತಾಯ ಪ್ರಮಾಣ ಪತ್ರ (ಕಂಪ್ಲೀಷನ್ ಸರ್ಟಿಫಿಕೇಟ್) ಪಡೆದರೆ ಫ್ಲ್ಯಾಟ್‌ಗಳನ್ನು ಮಾರಬಹುದಾಗಿದೆ. ಆದರೆ ಎಲ್ಲಿಯೂ ಕಟ್ಟಡದ ಗುಣಮಟ್ಟ ಹಾಗೂ ಸುರಕ್ಷತೆ ಪ್ರಮಾಣೀಕರಿಸುವ ವ್ಯವಸ್ಥೆ ಇಲ್ಲ.

**ಗುಣಮಟ್ಟ ಖಾತ್ರಿ ಇಲ್ಲ**

ನೂರಾರು ಕುಟುಂಬಗಳ ಸಾವಿರಾರು ಮಂದಿ ...ಸುವ ಕಟ್ಟಡಗಳ ಗುಣಮಟ್ಟ ತಪಾಸಣೆಗೆ ...ಂದಿಗೂ ಸೂಕ್ತ ವ್ಯವಸ್ಥೆ ಇಲ್ಲ. ಹಾಗಾಗಿ ಡೆವಲಪರ್ ಸಂಸ್ಥೆ ಇಲ್ಲವೇ ಗುತ್ತಿಗೆದಾರರು ಕಳಪೆ ಸಾಮಗ್ರಿ ಬಳಸಿ ರಾತ್ರೋರಾತ್ರಿ ಕಟ್ಟಡ ನಿರ್ಮಿಸಿ ಫ್ಲ್ಯಾಟ್‌ಗಳನ್ನು ಮಾರಾಟ ಮಾಡಲು ಅವಕಾಶ ಇದೆ. ನಂತರ ಕಟ್ಟಡ ಶಿಥಿಲಗೊಂಡು ಅನಾಹುತ ಸಂಭವಿಸಿದರೆ ಅದಕ್ಕೆ ಹೊಣೆ ಯಾರು ಎಂಬ ಬಗ್ಗೆ ಯಾರಲ್ಲೂ ಉತ್ತರವಿಲ್ಲ!

**ಆರಂಭದಲ್ಲೇ ಅಂಕುಶವಿಲ್ಲ**

ಕಟ್ಟಡ ನಿರ್ಮಾಣದಲ್ಲಿ ಕಳಪೆ ಕೆಲಸಕ್ಕೆ ಆರಂಭಿಕ ಹಂತದಲ್ಲೇ ಅಂಕುಶ ಹಾಕುವ ವ್ಯವಸ್ಥೆಯಿಲ್ಲ. ನಾನಾ ಹಂತಗಳಲ್ಲಿ ಗುಣ ಮಟ್ಟ ತಪಾಸಣೆ ವ್ಯವಸ್ಥೆ ಕೂಡ ಇಲ್ಲ. ಸಾರ್ವಜನಿಕರು ಖರೀದಿಸುವ ಫ್ಲ್ಯಾಟ್ ಇಲ್ಲವೇ ಕಟ್ಟಡಗಳ ಗುಣಮಟ್ಟಕ್ಕೆ ಖಾತ್ರಿ ನೀಡುವ ವ್ಯವಸ್ಥೆ ಇಲ್ಲದಿರುವುದರಿಂದ ಕಳಪೆ ಗುಣಮಟ್ಟ ಹಾಗೂ ಅನಧಿಕೃತ ಕಟ್ಟಡಗಳ ನಿರ್ಮಾಣ ಹೆಚ್ಚಾಗಿದೆ.

**ಅಧಿಕಾರಿಗಳ ನಿರ್ಲಕ್ಷ್ಯ**

ನಕ್ಷೆ ಪಡೆಯದೆ, ನಕ್ಷೆ ಹಾಗೂ ನಿಯಮಕ್ಕೆ ವಿರುದ್ಧವಾಗಿ ಕಟ್ಟಡ ನಿರ್ಮಾಣವಾಗುತ್ತಿದ್ದರೂ ಪಾಲಿಕೆಯ ಬಹುಪಾಲು ಎಂಜಿನಿಯರ್‌ಗಳು ನಿಯಂತ್ರಣಕ್ಕೆ ಮುಂದಾಗುವುದಿಲ್ಲ. ಕಟ್ಟಡ ಬೈಲಾಗಳ ಅನುಷ್ಠಾನದ ಮೇಲ್ವಿಚಾರಣೆಯನ್ನು ಸಮರ್ಪಕವಾಗಿ ನಿರ್ವಹಿಸದ ಕಾರಣ ಹೆಚ್ಚುವರಿ ಮಹಡಿ, ಹೆಚ್ಚುವರಿ ನಿರ್ಮಿತಿ ಪ್ರದೇಶದಲ್ಲಿ ಕಟ್ಟಡ ನಿರ್ಮಿಸುವುದು ನಡೆದೇ ಇದೆ.

**ತಪಾಸಣೆ ನಡೆಯಬೇಕಿದೆ**

ಸಾರ್ವಜನಿಕರ ಬಳಕೆಗೆ ನಿರ್ಮಾಣ ವಾಗುವ ಬಹುಮಹಡಿ ಕಟ್ಟಡಗಳ ಗುಣಮಟ್ಟ ತಪಾಸಣೆ ಹಾಗೂ ಬಾಳಿಕೆಯನ್ನು ದೃಢೀಕರಿಸುವ ವ್ಯವಸ್ಥೆ ಕಡ್ಡಾಯ ವಾಗಬೇಕು. ಕಟ್ಟಡದ ಗುಣ ಮಟ್ಟ ಮೌಲ್ಯಮಾಪನದ ಬಳಿಕವಷ್ಟೇ ಸಂಬಂಧಪಟ್ಟ ಇಲಾಖೆಗಳು ಸೂಕ್ತ ಅನುಮೋದನೆ ನೀಡುವ ಪದ್ಧತಿ ಜಾರಿಗೊಳಿಸ ಬಗ್ಗೆ ಇನ್ನಾದರೂ ಗಂಭೀರ ಚಿಂತನೆ ನಡೆಯಬೇಕಿದೆ.



ಟೈಮ್ಸ್ ಚಿತ್ರ

ಮುಂಬಯಿಯ ಠಾಣೆಯಲ್ಲಿ ಬಿಲ್ಡರ್‌ಗಳ ನಿರ್ಲಕ್ಷ್ಯದಿಂದ, ಕಳಪೆ ಕಾಮಗಾರಿಯಿಂದಾಗಿ ಕುಸಿದ ಕಟ್ಟಡ ಹಲವು ಜನರನ್ನು ಬಲಿ ತೆಗೆದುಕೊಂಡಿದೆ. ನಗರದಲ್ಲೂ ಇಂತಹ ಅನೇಕ ಕಟ್ಟಡಗಳಿದ್ದು, ಮುನ್ನೆಚ್ಚರಿಕೆ ವಹಿಸಬೇಕೆಂಬುದು ನಮ್ಮ ಕಳಕಳಿ.

### ಪರೀಕ್ಷೆ ಕಡ್ಡಾಯವಾಗಲಿ

ಸಾರ್ವಜನಿಕರ ಬಳಕೆಗೆ ನಿರ್ಮಾಣವಾಗುವ ಕಟ್ಟಡಗಳ ಗುಣಮಟ್ಟವನ್ನು ಆಯ್ದ ಪ್ರತಿಷ್ಠಿತ ಸಂಸ್ಥೆಗಳು ಪ್ರಮಾಣೀಕರಿಸುವುದು ಕಡ್ಡಾಯವಾಗಬೇಕು. ಪ್ರಮಾಣೀಕೃತ ವೃತ್ತಿಪರ ಎಂಜಿನಿಯರ್‌ಗಳು ಕಟ್ಟಡದ ಗುಣಮಟ್ಟದ ಬಗ್ಗೆ ವರದಿ ನೀಡುವ ವ್ಯವಸ್ಥೆ ಜಾರಿಯಾದರೆ ಕಳಪೆ ಕಾಮಗಾರಿಗೆ ಕಡಿವಾಣ ಹಾಕಬಹುದು.

-ಎ.ಪಿ.ಸ್ಯಾಮ್ಯುಯಲ್,
ನಿರ್ದೇಶಕರು, 'ಸ್ಕೂಪ್' ಕನ್‌ಸಲ್ಟೆನ್ಸಿ

### ತಜ್ಞರಿಂದ ತಪಾಸಣೆ ಸೂಕ್ತ

ಖಾಸಗಿ ಕಟ್ಟಡಗಳಲ್ಲಿ ಬೈಲಾ ಪಾಲನೆಯ ಮೇಲ್ವಿಚಾರಣೆ ನಡೆಸಲು ಪಾಲಿಕೆ ಅಧಿಕಾರಿಗಳಿಗೆ ಅಧಿಕಾರವಿದೆಯೇ ಹೊರತು ಗುಣಮಟ್ಟ ತಪಾಸಣೆಗೆ ಅವಕಾಶವಿಲ್ಲ.
ಆದರೆ ದೂರು ಆಧರಿಸಿ ಶಿಥಿಲವಾದ ಕಟ್ಟಡವನ್ನು ತೆರವುಗೊಳಿಸುವಂತೆ ಸೂಚಿಸುವ ಅಥವಾ ಮುಂಜಾಗರೂಕತಾ ಕ್ರಮವಾಗಿ ತೆರವುಗೊಳಿಸಲು ಅಧಿಕಾರವಿದೆ. ಖಾಸಗಿ ಕಟ್ಟಡಗಳ ಗುಣಮಟ್ಟ ತಪಾಸಣೆಗೆ ನೋಂದಾಯಿತ ತಜ್ಞರ ಪಟ್ಟಿಯನ್ನು ಪಾಲಿಕೆಯೇ ಪ್ರಕಟಿಸಬೇಕು. ಆಗ ಖಾಸಗಿ ಕಟ್ಟಡಗಳ ಗುಣಮಟ್ಟದ ಮೇಲೆ ನಿಗಾ ವಹಿಸಬಹುದಾಗಿದೆ.

-ಬಿಬಿಎಂಪಿ ಹಿರಿಯ ಅಧಿಕಾರಿ

### ಪ್ರಮಾಣೀಕರಿಸಬೇಕು

ಮೂರು ಹಾಗೂ ಅದಕ್ಕಿಂತ ಹೆಚ್ಚು ಮಹಡಿಗಳ ಸಾರ್ವಜನಿಕ ಕಟ್ಟಡ ನಿರ್ಮಾಣದ ನಾನಾ ಹಂತಗಳಲ್ಲಿ ಖಾಸಗಿ ಚಾರ್ಟೆಡ್ ಎಂಜಿನಿಯರ್‌ಗಳು ಗುಣಮಟ್ಟ ತಪಾಸಣೆ ನಡೆಸಿ ವರದಿ ನೀಡುವಂತಿರಬೇಕು. ಆ ವರದಿಗಳನ್ನು ಪರಿಶೀಲಿಸಿದ ನಂತರವಷ್ಟೇ ಬಿಬಿಎಂಪಿ, ಬೆಸ್ಕಾಂ, ಜಲಮಂಡಳಿ ಇತರೆ ಸಂಸ್ಥೆಗಳು ಅನುಮೋದನೆ ನೀಡುವ ವ್ಯವಸ್ಥೆ ಜಾರಿಯಾಗಬೇಕು.

-ಡಾ.ಪೂಡೆ ಪಿ.ಕೃಷ್ಣ
ಎಂಜಿನಿಯರ್‌ಗಳ ಸಂಸ್ಥೆಯ ರಾಜ್ಯ ಶಾಖೆ ಅಧ್ಯಕ್ಷ

ಸಂಜೆವಾಣಿ

ಗುರುವಾರ 14 ಮಾರ್ಚ್ 2013



ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ಇಂದು ನಡೆದ ವ್ಯಸನಗಳ ವಿರುದ್ಧ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಕಾರ್ಯಕ್ರಮದಲ್ಲಿ ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ಸಚ್ಚಿದಾನಂದ ಹೆಗಡೆ, ಉಪಕುಲಪತಿ ಬಿ. ತಿಮ್ಮೇಗೌಡ, ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ. ಕೃಷ್ಣ, ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ದಿನೇಶ್, ವಾರ್ತಾ ಇಲಾಖೆ ಜಂಟಿ ನಿರ್ದೇಶಕಿ ಡಾ. ಬಿ.ಆರ್. ಮಮತಾ ಅವರಿದ್ದಾರೆ.

ಸಂಯುಕ್ತ ಕರ್ನಾಟಕ । ಮಾರ್ಚ್ । 14 । 2013



ಬೆಂಗಳೂರಿನಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತವಾಗಿ ಬುಧವಾರ ಹಮ್ಮಿಕೊಂಡಿದ್ದ ಉಪನ್ಯಾಸ ಕಾರ್ಯಕ್ರಮದಲ್ಲಿ ಹಿರಿಯ ಸತ್ಯವ್ರತರ ಭಾವಚಿತ್ರಕ್ಕೆ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಪುಷ್ಪನಮನ ಸಲ್ಲಿಸಿದರು. ಡಾ.ವೂಡೇ ಪಿ.ಕೃಷ್ಣ, ಗೋಪಾಲಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

5
ಬೆಂಗಳೂರು ಉದಯವಾಣಿ
ಗುರುವಾರ | ಮಾರ್ಚ್ | 14 | 2013

# ಬೆಂಗಳೂರು

## ಪುಷ್ಪನಮನ...

ನಗರದ ಗಾಂಧಿಭವನದಲ್ಲಿ ಬುಧವಾರ ಆಯೋಜಿಸಿದ್ದ 'ಸತ್ಯವ್ರತರ ಕಾಳಜಿಗಳು' ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ಸತ್ಯವ್ರತರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಲಾಯಿತು. ಡಾ.ಎಚ್. ಎಸ್. ದೊರೆಸ್ವಾಮಿ, ನಾಮದೇವ ಶೆಣೈ, ಗೋಪಾಲಕೃಷ್ಣ, ಎಸ್.ಜಿ. ಸುಶೀಲಮ್ಮ ಇತರರು ಇದ್ದರು.



# 'ಸತ್ಯವ್ರತ ತಾತ್ವಿಕ ಹೋರಾಟಗಾರ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ತಾವು ನಂಬಿದ್ದ ತತ್ವಗಳಿಗೆ ಬದ್ಧರಾಗಿದ್ದ ಹೋರಾಟಗಾರ ಸತ್ಯವ್ರತ' ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಬುಧವಾರ ಬಣ್ಣಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ನಗರದಲ್ಲಿ ಜಂಟಿಯಾಗಿ ಆಯೋಜಿಸಿದ್ದ ಸತ್ಯವ್ರತ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದರು.

'ಸತ್ಯವ್ರತ ಅವರು ಹೋರಾಟಗಾರರ ಕುಟುಂಬದಿಂದ ಬಂದವರು. ಹೀಗಾಗಿ ಚಿಕ್ಕಂದಿನಿಂದಲೇ ಹೋರಾಟದ ಮನೋಭಾವ ಅವರಲ್ಲಿತ್ತು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಅವರು ಜೈಲು ಸೇರುವ ಮೂಲಕ ಉಳಿದವರನ್ನು ಹೋರಾಟಕ್ಕೆ ಹುರಿದುಂಬಿಸಿದರು' ಎಂದು ಅವರು ಹೇಳಿದರು.



ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬುಧವಾರ ಆಯೋಜಿಸಿದ್ದ ಸತ್ಯವ್ರತ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ಸತ್ಯವ್ರತರ ಸಂಬಂಧಿ ಗೋಪಾಲಕೃಷ್ಣ, ಸತ್ಯವ್ರತರ ಪತ್ನಿ ಲಕ್ಷ್ಮೀ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಅವರು ಸತ್ಯವ್ರತರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.

'ಅಪಾರ ಓದಿನ ಹಿನ್ನೆಲೆಯಿದ್ದ ಸತ್ಯವ್ರತ ಅವರ ಮಾತು ಹಾಗೂ ಬರಹ ಪ್ರಭಾವಶಾಲಿಯಾಗಿತ್ತು. ಕೈಗಾ ಅಣು ವಿದ್ಯುತ್ ಕೇಂದ್ರದ ಸ್ಥಾಪನೆ ವಿರುದ್ಧ ನಡೆದ ಹೋರಾಟದಲ್ಲಿ ಅವರು ಮುಂಚೂಣಿಯಲ್ಲಿದ್ದರು. ಗಾಂಧಿವಾದಿಯಾಗಿದ್ದ ಅವರು ಆನಂತರ ವಿನೋಭಾ ಅವರ ಪ್ರಭಾವದಿಂದ ಅವರ ಅನುಯಾಯಿಯಾದರು. ಗೋರಕ್ಷಣೆ ಹಾಗೂ ಭೂದಾನ ಚಳವಳಿಗಳಲ್ಲಿ ಸತ್ಯವ್ರತರ ಪಾತ್ರ ಪ್ರಮುಖವಾಗಿತ್ತು' ಎಂದರು.

ಸತ್ಯವ್ರತರ ಸಂಬಂಧಿ ಗೋಪಾಲಕೃಷ್ಣ ಮಾತನಾಡಿ, 'ಸತ್ಯವ್ರತರು ಆಹಾರದ ವಿಚಾರದಲ್ಲಿ ಹೆಚ್ಚು ಕಟ್ಟುನಿಟ್ಟಾಗಿದ್ದರು. ಹಾಲು, ಮೊಸರು, ತುಪ್ಪ ಬಳಸಿ ತಯಾರಿಸಿರುವ ಆಹಾರವನ್ನು ಅವರು ಸೇವಿಸುತ್ತಿರಲಿಲ್ಲ. ಸರಳ ಸ್ವಭಾವದ ಅವರು ಕುಟುಂಬದವರೊಂದಿಗೆ ಬೆರೆಯುತ್ತಿದ್ದರು; ಮಕ್ಕಳೊಂದಿಗೆ ಮಕ್ಕಳಾಗಿ ಆಟವಾಡುತ್ತಿದ್ದರು' ಎಂದರು.

ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಎಸ್.ಜಿ.ಸುಶೀಲಮ್ಮ, ಸತ್ಯವ್ರತರ ಸ್ನೇಹಿತ ನಾಮದೇವ ಶೆಣೈ ಮತ್ತಿತರರು ಉಪಸ್ಥಿತರಿದ್ದರು.



## ಉಪನ್ಯಾಸ...

ಗಾಂಧಿಭವನದಲ್ಲಿ ಬುಧವಾರ ಆಯೋಜಿಸಿದ್ದ ದಿ. ಸತ್ಯವ್ರತ ಸ್ಮಾರಕ ಉಪನ್ಯಾಸ ಕಾರ್ಯಕ್ರಮದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಸುಶೀಲಮ್ಮ ನಾಮದೇವ ಶೆಣೈ ಮತ್ತಿತರರು ಇದ್ದರು.

ಪ್ರಜಾವಾಣಿ
ಭಾನುವಾರ
24ನೇ ಫೆಬ್ರುವರಿ 2013

# ಉತ್ತಮ ಪ್ರಜೆಗಳಾಗಿ ರೂಪಿಸಿ- ಮಲ್ಲೇಪುರಂ

ಯಲಹಂಕ: 'ಶಿಕ್ಷಕರು ಜವಾಬ್ದಾರಿ ಅರಿತು ವಿದ್ಯಾರ್ಥಿಗಳಿಗೆ ಒಳ್ಳೆಯ ವಿದ್ಯೆ ಧಾರೆಯೆರೆದು ಉತ್ತಮ ಪ್ರಜೆಗಳನ್ನು ರೂಪಿಸಬೇಕು' ಎಂದು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ತಿಳಿಸಿದರು.

ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಈಚೆಗೆ ಆಯೋಜಿಸಿದ್ದ 'ಸ್ನೇಹ ಸಮ್ಮಿಲನ' ಹಾಗೂ ಹಿರಿಯರಿಗೆ ಸೇವಾ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಇಂದಿನ ಶಿಕ್ಷಕರಲ್ಲಿ ಅಧ್ಯಯನಶೀಲತೆಯ ಕೊರತೆ ಕಂಡುಬರುತ್ತಿದೆ. ಈ ದಿಸೆಯಲ್ಲಿ ನಿರಂತರ ಅಧ್ಯಯನಶೀಲರಾಗಬೇಕು' ಎಂದು ಸಲಹೆ ನೀಡಿದರು.

ಸನ್ಮಾನ ಸ್ವೀಕರಿಸಿ ಮಾತನಾಡಿದ ನಿವೃತ್ತ ಶಿಕ್ಷಕ ಪ್ರೊ.ಬೈರೇಗೌಡ, 'ಸಂಸ್ಥೆ ಒದಗಿಸಿಕೊಟ್ಟಿರುವ ಅವಕಾಶವನ್ನು ಬಳಸಿಕೊಂಡು, ನಾವೆಲ್ಲರೂ ಸಕ್ರಿಯವಾಗಿ ಕಾರ್ಯನಿರ್ವಹಿಸುವ ಮೂಲಕ ಸಂಸ್ಥೆಯ ಘನತೆಯನ್ನು ಎತ್ತಿಹಿಡಿಯಬೇಕು' ಎಂದರು. ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ವೂಡೇ. ಪಿ.ಕೃಷ್ಣ ಇದ್ದರು.



ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ಈಚೆಗೆ ನಡೆದ ಕಾರ್ಯಕ್ರಮದಲ್ಲಿ ನಿವೃತ್ತ ಪ್ರಾಂಶುಪಾಲ ಪ್ರೊ.ಎಂ.ಆರ್.ಶ್ರೀನಿವಾಸ್ ಅವರಿಗೆ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ (ಎಡದಿಂದ ಮೂರನೆಯವರು) ಸೇವಾ ಪ್ರಶಸ್ತಿ ಪ್ರದಾನ ಮಾಡಿದರು. ಶಿಕ್ಷಣ ಸಂಸ್ಥೆಯ ಜಂಟಿ ಕಾರ್ಯದರ್ಶಿ ಎ.ಆರ್.ಶ್ರೀನಿವಾಸಯ್ಯ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಉಪಾಧ್ಯಕ್ಷ ಡಬ್ಲ್ಯೂ.ಎಚ್.ಅನಿಲ್ ಕುಮಾರ್, ಕೋಶಾಧ್ಯಕ್ಷ ಬಿ.ಎಂ.ಪಾರ್ಥಸಾರಥಿ ಚಿತ್ರದಲ್ಲಿದ್ದಾರೆ.

ಪ್ರಜಾವಾಣಿ ಭಾನುವಾರ 17 ಫೆಬ್ರವರಿ 2013



ಯಲಹಂಕ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ವಾಣಿಜ್ಯ ಮತ್ತು ನಿರ್ವಹಣಾ ಪರಿಷತ್ ಶಿಕ್ಷಕರು ಸಂಯುಕ್ತವಾಗಿ ಏರ್ಪಡಿಸಿದ್ದ ಅಂತಾರಾಷ್ಟ್ರೀಯ ವಿಚಾರ ಸಂಕಿರಣವನ್ನು ಕೇಂದ್ರ ಸಚಿವ ಕೆ.ಎಚ್. ಮುನಿಯಪ್ಪ ಇಂದು ಉದ್ಘಾಟಿಸಿದರು. ಡಾ.ವಿ.ಆರ್. ಪಂಚಮುಖಿ, ಡಾ. ಸ್ಯಾಂಡ್ರ್ ಎಡ್ವರ್ಡ್ಸ್, ಪ್ರೊ. ಬ್ರಿಟಾನಿ ಕೆ. ಜೋನ್ ಗಿಾರ್ಡ್, ಎನ್.ಆರ್. ಪಂಡಿತಾರಾಧ್ಯ, ಕಾಲೇಜಿನ ಪ್ರಾಂಶುಪಾಲ ವೂಡೆ ಪಿ. ಕೃಷ್ಣ, ಡಾ.ಎಸ್.ಎನ್. ವೆಂಕಟೇಶ್, ಬಿಸ್ಸೇಗೌಡ, ನಾರಾಯಣಸ್ವಾಮಿ ಮತ್ತು ಡಾ.ಎಂ. ಪ್ರಕಾಶ್ ಇದ್ದಾರೆ.

ಈ ಸಂಜೆ

ಶುಕ್ರವಾರ, 15-02-2013



ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಹಮ್ಮಿಕೊಂಡಿದ್ದ 2 ದಿನಗಳ ಕಾರ್ಯಾಗಾರವನ್ನು ಕೇಂದ್ರ ಸಚಿವ ಕೆ.ಎಚ್. ಮುನಿಯಪ್ಪ ಉದ್ಘಾಟಿಸಿದರು. ಐಸಿಎಸ್‌ಇಆರ್‌ನ ಡಾ.ವಿ.ಆರ್. ಪಂಚಮುಖಿ, ಅಮೆರಿಕದ ಡಾ.ಸಾಂದ್ರಾ ಎಡ್ವರ್ಡ್ಸ್, ಪ್ರೊ.ಬ್ರಿಟಾನಿ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.



**ವಿಜಯವಾಣಿ** ಕನ್ನಡ ಸಾಹಿತ್ಯ ಸಮ್ಮೇಳನ ಸೋಮವಾರ 11 ಫೆಬ್ರವರಿ 2013

# ಅತ್ಯಾಚಾರಿಗಳ ಗಲ್ಲಿಗೇರಿಸಿ

## ■ ಕೋಚೆ ಜತೆ ಸಾಹಿತಿಗಳ ಸಂವಾದ ■ ಕೂಡಿ ಬಾಳೋಣ ಸಂದೇಶ ರವಾನೆ

ವಿಜಾಪುರ (ಫ.ಗು. ಹಳಕಟ್ಟಿ ವೇದಿಕೆ, ಬಸವಣ್ಣ ಮಹಾಮಂಟಪ): 'ಮಹಿಳೆ ಮೇಲೆ ಲೈಂಗಿಕ ದೌರ್ಜನ್ಯ ಮಾಡುವವರನ್ನು ಗಲ್ಲಿಗೇರಿಸಿ' ಎಂದು .79ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಕೋ. ಚೆನ್ನಬಸಪ್ಪ ಎಚ್ಚರಿಕೆ ಮಾತುಗಳನ್ನಾಡಿದ್ದಾರೆ.

'ದೆಹಲಿಯಲ್ಲಿ ಯುವತಿ ಮೇಲೆ ನಡೆದ ಅತ್ಯಾಚಾರ ಪ್ರಕರಣ ಸ್ತ್ರೀ ಸ್ವಾತಂತ್ರ್ಯವನ್ನೆ ಪ್ರಶ್ನಿಸಿತು.' ನಮ್ಮಲ್ಲೂ ಇಂತಹ ಪ್ರಕರಣಗಳು ನಡೆಯುತ್ತಿವೆ. ಆದರೆ ಬೆಳಕಿಗೆ ಬರುತ್ತಿಲ್ಲ. ಸ್ತ್ರೀಯರ ಮೇಲೆ ಇಂತಹ ಅತ್ಯಾಚಾರಗಳು ನಡೆದ ಸಂದರ್ಭದಲ್ಲಿ ಅಪರಾಧಿಗಳಿಗೆ ಗಲ್ಲು ಶಿಕ್ಷೆ ನೀಡಿ ಕಾನೂನಾತ್ಮಕವಾಗಿ ಮಟ್ಟ ಹಾಕಬೇಕಿದೆ. ಇದರಿಂದ ಮಾತ್ರವೇ ಸ್ತ್ರೀ ಸ್ವಾತಂತ್ರ್ಯ ಉಳಿಯುತ್ತದೆ' ಎಂದು ಕೋಚೆ ತಮ್ಮ ಮಾತನ್ನು ಸಮರ್ಥಿಸಿಕೊಂಡಿದ್ದಾರೆ.

ಅಕ್ಷರ ಜಾತ್ರೆಯ ಕೇಂದ್ರ ಬಿಂದು ಕೋಚೆ ಜತೆ ಭಾನುವಾರ ಸಂಜೆ ಸಾಹಿತಿಗಳು ನಡೆಸಿದ ಸಂವಾದದಲ್ಲಿ ಮಹಿಳಾ ಸ್ವಾತಂತ್ರ್ಯ, ಪ್ರತ್ಯೇಕ ರಾಜ್ಯದ ಕೂಗು, ರಾಜಕೀಯದ ಭ್ರಷ್ಟಾಚಾರ ನಿರ್ಮೂಲನೆ, ಯುವ ಸಮುದಾಯದಲ್ಲಿರುವ ದೋಷ, ಕುವೆಂಪು- ಬೇಂದ್ರೆ ವಿಚಾರಧಾರೆ, ಕಾವೇರಿ ನದಿ ಜಲ ವಿವಾದ, ಕನ್ನಡ ಶಾಲೆಗಳ ಅಳಿವು, ಉಳಿವು ಮೊದಲಾದ ವಿಚಾರಗಳಿಗೆ ತಮ್ಮ ನಿಲುವನ್ನು ಸ್ಪಷ್ಟಪಡಿಸಿದರು.

**ಒಂದಾಗಿ ಬಾಳೋಣ:** 'ಮುತ್ಸದ್ದಿಗಳು, ಪ್ರಭುತ್ವ ನಡೆಸುವವರು ಎಲ್ಲರನ್ನು ಸಮವಾಗಿ ನೋಡಿದರೆ ವಿಭಜನೆ ಪ್ರಶ್ನೆ ಬರುವುದಿಲ್ಲ. ಕರ್ನಾಟಕ ಏಕೀಕರಣ ಭೌಗೋಳಿಕವಾಗಿ ಆಗಿದೆ. ಮಾನಸಿಕವಾದ ಏಕೀಕರಣ ಆಗಬೇಕಾದರೆ ಕನ್ನಡ ಮನಸ್ಸುಗಳು ಒಂದಾಗಬೇಕು. ಇದು ಆಗಬೇಕಿದ್ದಲ್ಲಿ ಕನ್ನಡಿಗರು ಉತ್ತರ ಕರ್ನಾಟಕ, ಹಳೆ ಮೈಸೂರು ಭಾಗ, ಹೈದರಾಬಾದ್ ಕರ್ನಾಟಕ ಎನ್ನುವ ತಾರತಮ್ಯ ಭಾವನೆಯಿಂದ ಹೊರ ಬಂದು ನಾವೆಲ್ಲ ಒಂದು ಎನ್ನುವ ಪ್ರೇಮದಿಂದ ಕೂಡಿ ಬಾಳಬೇಕು ಎಂದು ಸಾಹಿತಿಗಳಾದ ಮೆಗಾಡೆ, ರಾಜಶೇಖರ ಉಬ್ಬಂಗಿ ಅವರ ಪ್ರಶ್ನೆಗೆ ಉತ್ತರಿಸಿದರು.

**ಸ್ವಾವಲಂಬಿಗಳಾಗಿರಿ:** 'ರಾಜಕೀಯದಲ್ಲಿ ಭ್ರಷ್ಟಾಚಾರ ತಪ್ಪಿಸಬೇಕಾದರೆ, ಜನರು ಸ್ವಾಭಿಮಾನಿಗಳಾಗಿ ಇರುವುದನ್ನು ಕಲಿಯಬೇಕು. ಜನತೆ ಸ್ವಾಭಿಮಾನದಿಂದ ಬದುಕಲು ಆರಂಭಿಸಿದರೆ ರಾಜಕೀಯದಲ್ಲಿ ಭ್ರಷ್ಟಾಚಾರ ನಿಯಂತ್ರಣಕ್ಕೆ ಬರುತ್ತದೆ' ಎಂದು ಸಾಹಿತಿ ನರಸಿಂಹಮೂರ್ತಿ ಪ್ರಶ್ನೆಗೆ ಉತ್ತರಿಸಿದರು.

**ಯುವಕರಿಗೆ ಬದುಕಲು ಕಲಿಸಿರಿ:** 'ಯುವಕರಲ್ಲಿ ದೋಷವಿದೆ ಅನಿಸುತ್ತಿದೆ. ಶಿಕ್ಷಣ ಪಡೆಯದೆ ಹಣ ಹಾಗೂ ಅಧಿಕಾರ ಸಂಪಾದನೆಗೆ ಮುಂದಾಗುತ್ತಿರುವುದು ನಮ್ಮ ಯುವಕರಲ್ಲಿ ಕಾಣುತ್ತಿರುವ ದೊಡ್ಡ ದೋಷ. ಯುವ ಸಮುದಾಯಕ್ಕೆ ಸರಿಯಾಗಿ ಬದುಕುವುದು ಹೇಗೆ ಎನ್ನುವುದನ್ನು ಮಾರ್ಗದರ್ಶನ ಮಾಡಿ ಜೊತೆಗೆ ಕರೆದುಕೊಂಡು ಹೋಗುವ ಜವಾಬ್ದಾರಿ ನಮ್ಮ ಮೇಲಿದೆ' ಎಂದು ಸಾಹಿತಿಗಳಾದ ವೂಡೇ ಪಿ ಕೃಷ್ಣ ಹಾಗೂ ಚಲುವೇಗೌಡರ ಪ್ರಶ್ನೆಗೆ ಉತ್ತರಿಸಿದರು.

ಕುವೆಂಪು ನನಗಿಷ್ಟ: 'ಕುವೆಂಪು ಬರೆದ ವಿಚಾರಧಾರೆಗಳು ನನಗೆ ಆದರ್ಶ. ಆದ್ದರಿಂದಲೇ ಕುವೆಂಪು ಎಂದರೆ ನನಗಿಷ್ಟ. ಹಾಗೆಂದು ಬೇಂದ್ರೆ ಮಾಸ್ತರರನ್ನು ಮರೆತವನು ನಾನಲ್ಲ. ಕುವೆಂಪು ಮತ್ತು ಬೇಂದ್ರೆಯನ್ನು ಸಮಾನವಾಗಿ ಕಾಣುತ್ತೇನೆ' ಎಂದು ಸಾಹಿತಿಗಳಾದ ಡಾ. ಪ್ರಕಾಶ್ ಖಾಡೆ ಪ್ರಶ್ನೆಗೆ ಉತ್ತರಿಸಿದರು.



ಸಾಹಿತ್ಯ ಸಮ್ಮೇಳನದ ಮುಖ್ಯ ವೇದಿಕೆಯಲ್ಲಿ ಸಮ್ಮೇಳನಾಧ್ಯಕ್ಷ ಕೋ.ಚೆನ್ನಬಸಪ್ಪ ಅವರನ್ನು ಕಸಾಪ ರಾಜ್ಯಾಧ್ಯಕ್ಷ ಪುಂಡಲೀಕ ಹಾಲಂಬಿ ಭಾನುವಾರ ಸನ್ಮಾನಿಸಿದರು.

### ಕಾವೇರಿ ವಿವಾದಕ್ಕೆ ಮಾತುಕತೆ ದಾರಿ

'ಕಾವೇರಿ ಜಲ ವಿವಾದದ ಇತ್ಯರ್ಥ ಕೋರ್ಟ್‌ಗಳಿಂದ ಹೊರಗೆ ಮಾತುಕತೆ ಮೂಲಕ ಆಗಬೇಕು. ಮೊದಲು ಕುಡಿಯುವ ನೀರಿಗೆ ಆದ್ಯತೆ, ಉಳಿದರೆ ಜಮೀನುಗಳಿಗೆ ಬಿಡಿ ಎಂದು ಸಂವಿಧಾನವೇ ಹೇಳಿದೆ. ನೀರಿನ ಸಮಸ್ಯೆ ಬಂದಾಗ ನ್ಯಾಯಾಲಯಕ್ಕೆ ಹೋಗುವುದಕ್ಕಿಂತ ಪರಸ್ಪರ ಮಾತುಕತೆ ಮೂಲಕ ಬಗೆಹರಿಸಿಕೊಳ್ಳುವುದು ಉತ್ತಮ' ಎಂದರು.

### ಸಂವಾದ ಕಡಿಮೆ, ಕಿರಿಕಿರಿ ಹೆಚ್ಚು!

ಕೋಚೆ ಅವರೊಂದಿಗೆ ಸಂವಾದ ನಡೆದಿದ್ದು ಬಹಳ ಕಡಿಮೆ. ಅದಕ್ಕಿಂತ ಕಿರಿಕಿರಿಯೇ ಹೆಚ್ಚಾಗಿ ನಡೆಯಿತು. ಸಂವಾದ ಆರಂಭವಾಗುತ್ತಿದ್ದಂತೆ ಮೈಕ್‌ಗಳಲ್ಲಿ ತಾಂತ್ರಿಕ ದೋಷ ಉಂಟಾದ್ದರಿಂದ, ಮಧ್ಯೆ ವಿದ್ಯುತ್ ಹೋದ ಕಾರಣ ಕೋಚೆ ಮಾತು ಸಭಿಕರಿಗೆ ಸರಿಯಾಗಿ ಕೇಳಿಸಲೇ ಇಲ್ಲ. ಇದರಿಂದ ಸಭೆಯಲ್ಲಿ ನೀರಸ ವಾತಾವರಣ ಉಂಟಾಯಿತು. ಸಂವಾದದ ನಿರ್ವಹಣೆ ಜವಾಬ್ದಾರಿ ಹೊತ್ತುಕೊಂಡಿದ್ದ ರಾಜ್ಯ ಮಹಿಳಾ ಲೇಖಕಿಯರ ಸಂಘದ ಅಧ್ಯಕ್ಷೆ ಡಾ. ವಸುಂಧರಾ ಭೂಪತಿ ಲೇಖಕರ ಪ್ರಶ್ನೆಗಳನ್ನು ಬರೆದುಕೊಂಡು ಕೋಚೆ ಅವರಿಗೆ ಹೇಳಿದರು. ಹೀಗಾಗಿ ಕೆಲವು ಪ್ರಶ್ನೆಗಳಿಗೆ ಮಾತ್ರವೇ ಸಮ್ಮೇಳನಾಧ್ಯಕ್ಷರು ಉತ್ತರಿಸಿದರು. ಇಡೀ ಸಂವಾದ 'ಔಪಚಾರಿಕ' ಎಂಬಂತೆ ನಡೆದಿದ್ದು ಅಕ್ಷರ ಪ್ರೇಮಿಗಳ ಬೇಸರಕ್ಕೆ ಕಾರಣವಾಯಿತು.

ಸಂಯುಕ್ತ ಕರ್ನಾಟಕ

ಕನ್ನಡ ಸಾಹಿತ್ಯ ಸಮ್ಮೇಳನ

2013 ಫೆಬ್ರವರಿ 9, 10, 11, ವಿಜಾಪುರ

11-2-2013 12

# ಕಾವೇರಿ: ಮಾತುಕತೆಯೊಂದೇ ದಾರಿ

ವಿಜಾಪುರ, ಫೆ. (ಹಳಕಟ್ಟಿ ಪ್ರಧಾನ ವೇದಿಕೆ), 10: ಕಾವೇರಿ ನೀರಿನ ವಿವಾದ ನ್ಯಾಯಾಲಯದ ಪರಿಹಾರಕ್ಕಿಂತಲೂ ರಾಜ್ಯಕ್ಕೆ ಉಳಿದಿರುವ ಒಂದೇ ದಾರಿ ಎಂದರೆ ಮಾತುಕತೆ ಮಾತ್ರ ಎಂದು ಸಮ್ಮೇಳನದ ಸರ್ವಾಧ್ಯಕ್ಷ ಕೋ. ಚೆನ್ನಬಸಪ್ಪ ಸಲಹೆ ನೀಡಿದರು.

ಸಭೆಯ ಹಲವು ಗೋಜಲುಗಳ ಮಧ್ಯೆ ಸಂವಾದಕ ಪ್ರದೀಪಕುಮಾರ ಎಚ್. ಅವರ ಪ್ರಶ್ನೆಗೆ ಉತ್ತರಿಸಿದ ಕೋಚೆ, ಸರಿಯಾದ ಅಂಕಿ-ಅಂಶಗಳನ್ನು ನೀಡುವಲ್ಲಿ ಸರ್ಕಾರ ವಿಫಲವಾಗಿದೆ. ಸರ್ವೋಚ್ಚ ನ್ಯಾಯಾಲಯ ಕುಡಿಯುವ ನೀರಿಗೆ ಆದ್ಯತೆ ನೀಡಬೇಕು. ನಂತರ ದನಕರುಗಳಿಗೆ ಆ ನಂತರದಲ್ಲಿ ಬೆಳೆಗಳಿಗೆ ನೀರು ನೀಡಬೇಕು ಎಂಬ ತೀರ್ಪು ನೀಡಿದೆ. ಆದರೆ ನೀರಾವರಿ ಭಾಗ ರಾಜ್ಯದಲ್ಲಿ ತಮಿಳುನಾಡಿಗಿಂತ ಕಡಿಮೆ ಇರುವದರಿಂದ ಇಂಥ ಸಮಸ್ಯೆ ಎದುರಾಗುತ್ತಲೇ ಇದೆ. ಈ ಹಿಂದೆ ಮಾಡಿಕೊಂಡ ಸಿಇಸಿ ಒಪ್ಪಂದ ಮತ್ತು ಕೋರ್ಟ್ ಆದೇಶ ಪರಿಪಾಲನೆ ಮಾಡಲೇಬೇಕಾಗಿ ಬಂಧಿರುವದರಿಂದ ರಾಜ್ಯಕ್ಕೆ ಮುಂದಿನ ದಾರಿಯೇ ಇಲ್ಲವೆಂದ ಅವರು, ಸರಿಯಾದ ಅಂಕಿ ಅಂಶಗಳನ್ನು ಮುಂದಿಟ್ಟುಕೊಂಡು ಉಭಯ ರಾಜ್ಯಗಳು ಸೌಹಾರ್ದ ಮಾತುಕತೆಗೆ ಮುಂದಾಗಬೇಕಿದೆ ಎಂದರು.

ನೀವು ಬರೆದಿರುವ ಅನೇಕ ಪುಸ್ತಕಗಳಲ್ಲಿ ಕುವೆಂಪು ಪ್ರಭಾವ ಹೆಚ್ಚಾಗಿದೆ ಕಾರಣವೇನು? ಹೀಗೆ ಸಂವಾದಕರೊಬ್ಬರ ತೂರಿ ಬಂದ ಪ್ರಶ್ನೆಗೆ ಉತ್ತರಿಸಿದ ಕೋಚೆ, ಬಡತನ, ಸಮಾನತೆ ಮೊದಲಾದ ವಿಷಯಗಳ ಬಗ್ಗೆ ಕುವೆಂಪು ಬರೆದಿದ್ದಾರೆ. ಅವರನ್ನು ಓದಿದ್ದೇನೆ. ನನ್ನ ಅಭಿಪ್ರಾಯಗಳು ಅವೇ ಆಗಿರುವದರಿಂದ ನನ್ನ ಸಾಹಿತ್ಯ ಕೃತಿಗಳಲ್ಲಿ ಮೂಡಿ ಬಂದಿವೆ. ಆದರೆ ಅರವಿಂದ, ಬಸವಣ್ಣ ಹೀಗೆ ಅನೇಕರ ಪ್ರಭಾವಗಳು ನನ್ನ



ಮೇಲೆ ಆಗಿವೆ. ಬೇಂದ್ರೆ ಮಾಸ್ತರ ಬಗ್ಗೆಯೂ ತುಂಬಾ ಗೌರವವೇ ಇದೆ. ಎಲ್ಲರೂ ನನ್ನ ದೃಷ್ಟಿಯಲ್ಲಿ ಸಮಾನ ಗೌರವಕ್ಕೆ ಪಾತ್ರರು. ಆದರೆ ಅವರ ಬಗ್ಗೆ ತಾರತಮ್ಯ ಧೋರಣೆ ಭಾವ ನನಗಿಲ್ಲವೆಂದರು.

ಇಂದಿನ ರಾಜಕಾರಣಿಗಳ ಅಕ್ರಮ ಸಂಪಾದನೆ ಬಗ್ಗೆ ಕೇಳಿದ ಪ್ರಶ್ನೆಗೆ ಉತ್ತರಿಸಿ, ಅಗತ್ಯಕ್ಕಿಂತ ಹೆಚ್ಚಿನ ಹಣ ಗಳಿಕೆ ಕಳ್ಳತನವಾಗುತ್ತದೆ. ಅಧಿಕಾರ ಹಣ ಗಳಿಸುವದಕ್ಕಾಗಿ ಅಲ್ಲ; ಬದಲಾಗಿ ಜನಸೇವೆಗೆ ಬಳಕೆಯಾಗಬೇಕು. ಈ ಎಲ್ಲದರ ಹಿಂದೆ ಮತ್ತೆ ಮತ್ತೆ ಗಾಂಧಿಜಿ ತತ್ವಗಳು ನೆನಪಾಗುತ್ತವೆ. ಪ್ರಸ್ತುತವಾಗಿ ಅನುಷ್ಠಾನಗೊಳ್ಳಬೇಕಿದೆ ಎಂದ ಕೋಚೆ ಹೇಳಿದರು.

## ಮಾನಸಿಕ ಏಕೀಕರಣ ಬೇಕು

ಏಕೀಕರಣದ ಉದ್ದೇಶ ಸಫಲವಾಗಿಲ್ಲ. ಆದರೆ ಏಕೀಕರಣವಾಗಿದ್ದು ತಪ್ಪಲ್ಲ. ಮಾನಸಿಕವಾಗಿ ಏಕೀಕರಣವಾಗಬೇಕಿದೆ. ಇದಕ್ಕೆ ಬಿಟ್ಟು ಹೋದ ಗಡಿ ಪ್ರದೇಶಗಳು ಅಲ್ಲದೇ ರಾಜ್ಯದಲ್ಲಿ ಸೌಲಭ್ಯವಂಚಿತ ಪ್ರದೇಶಗಳಿಗೆ ಸೂಕ್ತ ಸೌಲಭ್ಯಗಳನ್ನು ನೀಡುವದರೊಂದಿಗೆ ಅವರ ಮಾನಸಿಕತೆಯನ್ನು ಸಂಪಾದಿಸಬೇಕಿದೆ. ಮನುಷ್ಯನ ಮನಸ್ಸು ಕ್ವಿಕ್ ಫಿಕ್ಸ್ ಗಮ್ ಇದ್ದ ಹಾಗೆ. ಯಾವುದೇ ಮೊದಲ ಅನುಭವವೋ ಅದು ಮನಸ್ಸಿಗೆ ನಾಟಿಕೊಂಡು ಬಿಡುತ್ತದೆ. ಅದಕ್ಕೆ ಮೊದಲು ಮಾನಸಿಕ ಏಕೀಕರಣದ ಸರಕಾರದಿಂದ ಕೆಲಸವಾಗಿಲಿಲ್ಲ. ಹೀಗಾಗಿ ಮತ್ತೆ ಅದನ್ನು ಸರಿಪಡಿಸಬೇಕಿದೆ ಎಂದರು.

ರಾಜ್ಯದಲ್ಲಿ ಮೈಸೂರು, ಮಂಗಳೂರು ಅಲ್ಲದೇ ಧಾರವಾಡವನ್ನು ಮಾತ್ರ ಸಾಹಿತ್ತಿಕ ಮತ್ತು ಸಂಸ್ಕೃತಿಯಾಗಿ ಸಾಹಿತ್ಯ ಚರಿತ್ರೆಯಲ್ಲಿ ಗುರುತಿಸಲಾಗುತ್ತಿದೆ. ಇದಕ್ಕೆ ಹೊರತಾಗಿ ವಿಜಾಪುರದ ಭಾಗದಲ್ಲಿ ಶರಣಸಾಹಿತ್ಯ, ಜಾನಪದ, ಸೂಫಿ ಹೀಗೆ ಅನೇಕ ಸಮೃದ್ಧ ಸಾಹಿತ್ಯ ಮೂಡಿರಬೇಕಾದರೆ ವಿಜಾಪುರವನ್ನು ಮತ್ತೊಂದು ವಲಯವನ್ನಾಗಿ ರೂಪಿಸಬೇಕೆಂಬ ಪ್ರಕಾಶ ಖಾಡೆ ಅವರ ಮಾತಿಗೆ ಕೋಚೆ ದನಿಗೂಡಿಸಿದರು.

ವಿಶ್ವನಾಥ ಅವರ ಪ್ರಶ್ನೆಗೆ ಉತ್ತರಿಸಿದ ಕೋಚೆ, ಕನ್ನಡ ಶಾಲೆಗಳನ್ನು ಮುಚ್ಚದಂತೆ ಸರಕಾರ ಕ್ರಮ ಕೈಗೊಳ್ಳಬೇಕಲ್ಲದೇ ಅಲ್ಲಿ ಸೂಕ್ತ ಕಾಳಜಿ ವಹಿಸಿ ಸೌಲಭ್ಯಗಳನ್ನು ನೀಡಬೇಕು ಎಂದು ಹೇಳಿದರು.

ಸರಸ್ವತಿ ಚಿಮ್ಮಲಗಿ, ಡಾ. ರಾಜಶೇಖರ ಇಚ್ಚಂಗಿ ಮೊದಲಾದವರ ಪ್ರಶ್ನೆಗಳಿಗೆ ಉತ್ತರಗಳು ದೊರೆಯಲೇ ಇಲ್ಲ. ಕೋಚೆ ಇಳಿವಯಸ್ಸು, ವೇಳೆಯ ಅಭಾವವೂ ಕಾರಣವಾಗಿತ್ತು.

ಶಿವಯೋಗಿ, ನಿರಂಜನಾರಾಧ್ಯ, ಶೋಭಾ ಹಿತ್ತಲಮನಿ, ಬಿ. ಎನ್. ರಾಮಸ್ವಾಮಿ, ಇಬ್ರಾಹಿಂ ಮುಲ್ಲಾ, ನರಸಿಂಹಮೂರ್ತಿ, ಚಲುವೇಗೌಡ, ವೋಡೆ ಕೃಷ್ಣ ಸೇರಿದಂತೆ ಅನೇಕರು ಸಂವಾದಲ್ಲಿ ಪಾಲ್ಗೊಂಡಿದ್ದರು.



**ವಿಜಯವಾಣಿ** ಕನ್ನಡ ಸಾಹಿತ್ಯ ಸಮ್ಮೇಳನ ಸೋಮವಾರ 11 ಫೆಬ್ರವರಿ 2013

# ಅತ್ಯಾಚಾರಿಗಳ ಗಲ್ಲಿಗೇರಿಸಿ

## ■ ಕೋಚೆ ಜತೆ ಸಾಹಿತಿಗಳ ಸಂವಾದ ■ ಕೂಡಿ ಬಾಳೋಣ ಸಂದೇಶ ರವಾನೆ

ವಿಜಾಪುರ (ಫ.ಗು. ಹಳಕಟ್ಟಿ ವೇದಿಕೆ, ಬಸವಣ್ಣ ಮಹಾಮಂಟಪ): 'ಮಹಿಳೆ ಮೇಲೆ ಲೈಂಗಿಕ ದೌರ್ಜನ್ಯ ಮಾಡುವವರನ್ನು ಗಲ್ಲಿಗೇರಿಸಿ' ಎಂದು 79ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಕೋ. ಚೆನ್ನಬಸಪ್ಪ ಎಚ್ಚರಿಕೆ ಮಾತುಗಳನ್ನಾಡಿದ್ದಾರೆ.

'ದೆಹಲಿಯಲ್ಲಿ ಯುವತಿ ಮೇಲೆ ನಡೆದ ಅತ್ಯಾಚಾರ ಪ್ರಕರಣ ಸ್ತ್ರೀ ಸ್ವಾತಂತ್ರ್ಯವನ್ನೆ ಪ್ರಶ್ನಿಸಿತು. ನಮ್ಮಲ್ಲೂ ಇಂತಹ ಪ್ರಕರಣಗಳು ನಡೆಯುತ್ತಿವೆ. ಆದರೆ ಬೆಳಕಿಗೆ ಬರುತ್ತಿಲ್ಲ. ಸ್ತ್ರೀಯರ ಮೇಲೆ ಇಂತಹ ಅತ್ಯಾಚಾರಗಳು ನಡೆದ ಸಂದರ್ಭದಲ್ಲಿ ಅಪರಾಧಿಗಳಿಗೆ ಗಲ್ಲು ಶಿಕ್ಷೆ ನೀಡಿ ಕಾನೂನಾತ್ಮಕವಾಗಿ ಮಟ್ಟ ಹಾಕಬೇಕಿದೆ. ಇದರಿಂದ ಮಾತ್ರವೇ ಸ್ತ್ರೀ ಸ್ವಾತಂತ್ರ್ಯ ಉಳಿಯುತ್ತದೆ' ಎಂದು ಕೋಚೆ ತಮ್ಮ ಮಾತನ್ನು ಸಮರ್ಥಿಸಿಕೊಂಡಿದ್ದಾರೆ.

ಅಕ್ಷರ ಜಾತ್ರೆಯ ಕೇಂದ್ರ ಬಿಂದು ಕೋಚೆ ಭಾನುವಾರ ಸಂಜೆ ಸಾಹಿತಿಗಳು ನಡೆಸಿದ ಸಂವಾದದಲ್ಲಿ ಮಹಿಳಾ ಸ್ವಾತಂತ್ರ್ಯ, ಪ್ರತ್ಯೇಕ ರಾಜ್ಯದ ಕೂಗು, ರಾಜಕೀಯದ ಭ್ರಷ್ಟಾಚಾರ ನಿರ್ಮೂಲನೆ, ಯುವ ಸಮುದಾಯದಲ್ಲಿರುವ ದೋಷ, ಕುವೆಂಪು- ಬೇಂದ್ರೆ ವಿಚಾರಧಾರೆ, ಕಾವೇರಿ ನದಿ ಜಲ ವಿವಾದ, ಕನ್ನಡ ಶಾಲೆಗಳ ಅಳಿವು, ಉಳಿವು ಮೊದಲಾದ ವಿಚಾರಗಳಿಗೆ ತಮ್ಮ ನಿಲುವನ್ನು ಸ್ಪಷ್ಟಪಡಿಸಿದರು.

**ಒಂದಾಗಿ ಬಾಳೋಣ:** 'ಮುತ್ಸದ್ದಿಗಳು, ಪ್ರಭುತ್ವ ನಡೆಸುವವರು ಎಲ್ಲರನ್ನು ಸಮವಾಗಿ ನೋಡಿದರೆ ವಿಭಜನೆ ಪ್ರಶ್ನೆ ಬರುವುದಿಲ್ಲ. ಕರ್ನಾಟಕ ಏಕೀಕರಣ ಭೌಗೋಳಿಕವಾಗಿ ಆಗಿದೆ. ಮಾನಸಿಕವಾದ ಏಕೀಕರಣ ಆಗಬೇಕಾದರೆ ಕನ್ನಡ ಮನಸ್ಸುಗಳು ಒಂದಾಗಬೇಕು. ಇದು ಆಗಬೇಕಿದ್ದಲ್ಲಿ ಕನ್ನಡಿಗರು ಉತ್ತರ ಕರ್ನಾಟಕ, ಹಳೆ ಮೈಸೂರು ಭಾಗ, ಹೈದರಾಬಾದ್ ಕರ್ನಾಟಕ ಎನ್ನುವ ತಾರತಮ್ಯ ಭಾವನೆಯಿಂದ ಹೊರ ಬಂದು ನಾವೆಲ್ಲ ಒಂದು ಎನ್ನುವ ಪ್ರೇಮದಿಂದ ಕೂಡಿ ಬಾಳಬೇಕು ಎಂದು ಸಾಹಿತಿಗಳಾದ ಮಗಾಡೆ, ರಾಜಶೇಖರ ಉಚ್ಚಂಗಿ ಅವರ ಪ್ರಶ್ನೆಗೆ ಉತ್ತರಿಸಿದರು.

**ಸ್ವಾವಲಂಬಿಗಳಾಗಿರಿ:** 'ರಾಜಕೀಯದಲ್ಲಿ ಭ್ರಷ್ಟಾಚಾರ ತಪ್ಪಿಸಬೇಕಾದರೆ ಜನರು ಸ್ವಾಭಿಮಾನಿಗಳಾಗಿ ಇರುವುದನ್ನು ಕಲಿಯಬೇಕು. ಜನತೆ ಸ್ವಾಭಿಮಾನದಿಂದ ಬದುಕಲು ಆರಂಭಿಸಿದರೆ ರಾಜಕೀಯದಲ್ಲಿ ಭ್ರಷ್ಟಾಚಾರ ನಿಯಂತ್ರಣಕ್ಕೆ ಬರುತ್ತದೆ' ಎಂದು ಸಾಹಿತಿ ನರಸಿಂಹಮೂರ್ತಿ ಪ್ರಶ್ನೆಗೆ ಉತ್ತರಿಸಿದರು.

**ಯುವಕರಿಗೆ ಬದುಕಲು ಕಲಿಸಿರಿ:** 'ಯುವಕರಲ್ಲಿ ದೋಷವಿದೆ ಅನಿಸುತ್ತಿದೆ. ಶಿಕ್ಷಣ ಪಡೆಯದೆ ಹಣ ಹಾಗೂ ಅಧಿಕಾರ ಸಂಪಾದನೆಗೆ ಮುಂದಾಗುತ್ತಿರುವುದು ನಮ್ಮ ಯುವಕರಲ್ಲಿ ಕಾಣುತ್ತಿರುವ ದೊಡ್ಡ ದೋಷ. ಯುವ ಸಮುದಾಯಕ್ಕೆ ಸರಿಯಾಗಿ ಬದುಕುವುದು ಹೇಗೆ ಎನ್ನುವುದನ್ನು ಮಾರ್ಗದರ್ಶನ ಮಾಡಿ ಜೊತೆಗೆ ಕರೆದುಕೊಂಡು ಹೋಗುವ ಜವಾಬ್ದಾರಿ ನಮ್ಮ ಮೇಲಿದೆ' ಎಂದು ಸಾಹಿತಿಗಳಾದ ಪ್ರೊ. ಪಿ ಕೃಷ್ಣ ಹಾಗೂ ಚಲುವೇಗೌಡರ ಪ್ರಶ್ನೆಗೆ ಉತ್ತರಿಸಿದರು.

**ಕುವೆಂಪು ನನಗಿಷ್ಟ:** 'ಕುವೆಂಪು ಬರೆದ ವಿಚಾರಧಾರೆಗಳು ನನಗೆ ಆದರ್ಶ. ಆದ್ದರಿಂದಲೇ ಕುವೆಂಪು ಎಂದರೆ ನನಗಿಷ್ಟ. ಹಾಗೆಂದು ಬೇಂದ್ರೆ ಮಾಸ್ತರರನ್ನು ಮರೆತವನು ನಾನಲ್ಲ. ಕುವೆಂಪು ಮತ್ತು ಬೇಂದ್ರೆಯನ್ನು ಸಮಾನವಾಗಿ ಕಾಣುತ್ತೇನೆ' ಎಂದು ಸಾಹಿತಿಗಳಾದ ಹ.ವಿ. ಪ್ರಕಾಶ, ಮಾಡೆ ಪ್ರಶ್ನೆಗೆ ಉತ್ತರಿಸಿದರು.



ಸಾಹಿತ್ಯ ಸಮ್ಮೇಳನದ ಮುಖ್ಯ ವೇದಿಕೆಯಲ್ಲಿ ಸಮ್ಮೇಳನಾಧ್ಯಕ್ಷ ಕೋ. ಚೆನ್ನಬಸಪ್ಪ ಅವರನ್ನು ಕಸಾಪ ರಾಜ್ಯಾಧ್ಯಕ್ಷ ಪುಂಡಲೀಕ ಹಾಲಂಬಿ ಭಾನುವಾರ ಸನ್ಮಾನಿಸಿದರು.

### ಕಾವೇರಿ ವಿವಾದಕ್ಕೆ ಮಾತುಕತೆ ದಾರಿ

ಕಾವೇರಿ ಜಲ ವಿವಾದದ ಇತ್ಯರ್ಥ ಕೋರ್ಟ್‌ಗಳಿಂದ ಹೊರಗೆ ಮಾತುಕತೆ ಮೂಲಕ ಆಗಬೇಕು. ಮೊದಲು ಕುಡಿಯುವ ನೀರಿಗೆ ಆದ್ಯತೆ, ಉಳಿದರೆ ಜಮೀನುಗಳಿಗೆ ಬಿಡಿ ಎಂದು ಸಂವಿಧಾನವೇ ಹೇಳಿದೆ. ನೀರಿನ ಸಮಸ್ಯೆ ಬಂದಾಗ ನ್ಯಾಯಾಲಯಕ್ಕೆ ಹೋಗುವುದಕ್ಕಿಂತ ಪರಸ್ಪರ ಮಾತುಕತೆ ಮೂಲಕ ಬಗೆಹರಿಸಿಕೊಳ್ಳುವುದು ಉತ್ತಮ ಎಂದರು.

### ಸಂವಾದ ಕಡಿಮೆ, ಕಿರಿಕಿರಿ ಹೆಚ್ಚು!

ಕೋಚೆ ಅವರೊಂದಿಗೆ ಸಂವಾದ ನಡೆದಿದ್ದು ಬಹಳ ಕಡಿಮೆ. ಅದಕ್ಕಿಂತ ಕಿರಿಕಿರಿಯೇ ಹೆಚ್ಚಾಗಿ ನಡೆಯಿತು. ಸಂವಾದ ಆರಂಭವಾಗುತ್ತಿದ್ದಂತೆ [illegible]ಗಳಲ್ಲಿ ತಾಂತ್ರಿಕ ದೋಷ ಉಂಟಾದ್ದರಿಂದ ಮಧ್ಯೆ ವಿದ್ಯುತ್ ಹೋದ ಕಾರಣ ಕೋಚೆ ಮಾತು ಸಭಿಕರಿಗೆ ಸರಿಯಾಗಿ ಕೇಳಿಸಲೇ ಇಲ್ಲ. ಇದರಿಂದ ಸಭೆಯಲ್ಲಿ ನೀರಸ ವಾತಾವರಣ ಉಂಟಾಯಿತು. ಸಂವಾದದ ನಿರ್ವಹಣೆ ಜವಾಬ್ದಾರಿ ಹೊತ್ತುಕೊಂಡಿದ್ದ ರಾಜ್ಯ ಮಹಿಳಾ ಲೇಖಕಿಯರ ಸಂಘದ ಅಧ್ಯಕ್ಷೆ ವಸುಂಧರಾ ಭೂಪತಿ ಲೇಖಕರ ಪ್ರಶ್ನೆಗಳನ್ನು ಬರೆದುಕೊಂಡು ಕೋಚೆ ಅವರಿಗೆ ಹೇಳಿದರು. ಹೆಚ್ಚಾಗಿ ಕೆಲವು ಪ್ರಶ್ನೆಗಳಿಗೆ ಮಾತ್ರವೇ ಸಮ್ಮೇಳನಾಧ್ಯಕ್ಷರು ಉತ್ತರಿಸಿದರು. ಇಡೀ ಸಂವಾದ ಔಪಚಾರಿಕ ಎಂಬಂತೆ ನಡೆದದ್ದು ಅಕ್ಷರ ಪ್ರೇಮಿಗಳ ಬೇಸರಕ್ಕೆ ಕಾರಣವಾಯಿತು.

ಸೋಮವಾ ಫೆಬ್ರವರಿ 2013

# ನಮ್ಮ ವಿಜಾಪುರ



ವಿಜಯ ಕರ್ನಾಟಕ | ಗುಮ್ಮಟ ನಗರಿಯ ಧ್ವನಿ

# ಅಸಮಾನತೆ ಪೀಡೆ ತೊಲಗಲಿ: ಕೋಚೆ

• ಸಂಗಮೇಶ ಟಿ. ಚೂರಿ ವಿಜಾಪುರ, ಹಳಕಟ್ಟಿ ಪ್ರಧಾನ ವೇದಿಕೆ.

ಕರ್ನಾಟಕ ಏಕೀಕರಣವಾಗಿ ಹಲವು ವರ್ಷಗಳೇ ಗತಿಸಿವೆ. ಆದರೆ ಮಾನಸಿಕವಾಗಿ ಏಕೀಕರಣವಾಗಿಲ್ಲ ಎಂಬುದು ಸೂರ್ಯನಷ್ಟೇ ಸತ್ಯ. ಅಖಂಡ ಕರ್ನಾಟಕದಲ್ಲಿ ಅಸಮಾನತೆ ಎಂಬುದು ಅನೂಚಾನವಾಗಿ ಮುಂದುವರಿದುಕೊಂಡು ಬಂದಿದೆ. ಈ ಅಸಮಾನತೆ ಎಂಬ ಪೀಡೆ ತೊಲಗಿದಾಗ ಮಾತ್ರ ಕರ್ನಾಟಕ ಏಕೀಕರಣವಾದದ್ದು ಸಾರ್ಥಕವಾಗಲಿದೆ ಎಂದು ಸಮ್ಮೇಳನಾಧ್ಯಕ್ಷ ಕೋ. ಚೆನ್ನಬಸಪ್ಪ ಹೇಳಿದರು.

ಇಲ್ಲಿನ ಸೈನಿಕ ಶಾಲೆಯಲ್ಲಿ ನಡೆಯುತ್ತಿರುವ, 79ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಎರಡನೇ ದಿನವಾದ ಭಾನುವಾರ ಸಮ್ಮೇಳನಾಧ್ಯಕ್ಷರೊಂದಿಗೆ ಸಂವಾದ ಗೋಷ್ಠಿಯಲ್ಲಿ ಮೇ.ಕ್ಯ.ಮೇಗಾಡೆ ಕೇಳಿದ ಪ್ರಶ್ನೆಗೆ ಕೋಚೆ ಉತ್ತರಿಸಿದರು.

ಏಕೀಕರಣದ ಉದ್ದೇಶ ಇದುವರೆಗೆ ಸಫಲವಾಗಿಲ್ಲ, ಮಾನಸಿಕವಾಗಿ ಮಾತ್ರ ಏಕೀಕರಣವಾಗಬೇಕಿದೆ. ಬಿಟ್ಟು ಹೋದ ಗಡಿ ಪ್ರದೇಶಗಳು ಸೌಲಭ್ಯ ವಂಚಿತ ಪ್ರದೇಶಗಳಿಗೆ ಸೂಕ್ತ ಸೌಲಭ್ಯ ನೀಡುವುದರೊಂದಿಗೆ ಅವರ ಮಾನಸಿಕತೆ ಅರಿತು ಮನಸ್ಸು ಮನಸುಗಳನ್ನು ಬೆಸೆಯುವ ಕೆಲಸ ನಡೆಯಬೇಕಿದೆ ಎಂದರು.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಈಗಾಗಲೇ ಮೈಸೂರು, ಮಂಗಳೂರು ಹಾಗೂ ಧಾರವಾಡ ಕೇಂದ್ರಗಳು ಬರೆಯುತ್ತಿವೆ. 4ನೇ ಕೇಂದ್ರವನ್ನಾಗಿ ವಿಜಾಪುರ ಜಿಲ್ಲೆಯ ಹಲಸಂಗಿಯನ್ನು ಪರಿಗಣಿಸಬೇಕಾದ ಅನಿವಾರ್ಯತೆ





ವಿಜಾಪುರದಲ್ಲಿ ನಡೆಯುತ್ತಿರುವ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾನುವಾರ ಸಮ್ಮೇಳನಾಧ್ಯಕ್ಷರೊಂದಿಗೆ ಸಂವಾದ ಗೋಷ್ಠಿಯನ್ನುದ್ದೇಶಿಸಿ ಸಮ್ಮೇಳನಾಧ್ಯಕ್ಷ ಕೋ. ಚನ್ನಬಸಪ್ಪನವರು ಮಾತನಾಡಿದರು.

ಹೆಚ್ಚುತ್ತಿದೆ. ಹಾಗಾಗಿ ಈ ಭಾಗದ ಅಲಕ್ಷಿತ ಜನಪದ, ಅನುಭಾವ, ಸೂಫಿ ಹಾಗೂ ಜನಮುಖಿ ಸಾಹಿತ್ಯದ ಅಭ್ಯಾಸ ನಡೆಯಬೇಕಾದರೆ ನಮ್ಮ ಪಠ್ಯಪುಸ್ತಕಗಳಲ್ಲಿ ವಿವಿಗಳು ಹಲಸಂಗಿಯನ್ನು 4ನೇ ಕೇಂದ್ರವಾಗಿ ಘೋಷಿಸಿ ಅಧ್ಯಯನ ನಡೆಸಬೇಕು. ಆ ಮೂಲಕ ಈ ಭಾಗದ ಸಾಹಿತ್ಯದ ಮೂಲಕ ಹೊಸ ಚರಿತ್ರೆಯನ್ನು ಕಟ್ಟಬೇಕಾದ ಅವಶ್ಯವಿದೆ ಎಂದು ಡಾ. ಪ್ರಕಾಶ ಖಾಡೆ ಕೇಳಿದ ಪ್ರಶ್ನೆಗೆ ಉತ್ತರಿಸಿದರು.

ಜಲ ವಿವಾದ ವಿಷಯಕ್ಕೆ ಸಂಬಂಧಿಸಿದಂತೆ ಡಾ. ಪ್ರದೀಪಕುಮಾರ ಹೆಬ್ರಿ ಕೇಳಿದ ಪ್ರಶ್ನೆಗೆ ಉತ್ತರಿಸಿದ ಕೋಚೆಯವರು, ಜಲವಿವಾದ ಏನೇ ಇರಲಿ. ಮೊದಲು ಕುಡಿಯುವ ನೀರಿಗೆ ಆದ್ಯತೆ ನೀಡಬೇಕು. ಬಳಿಕ ದನ-ಕರುಗಳಿಗೆ ವ್ಯವಸ್ಥೆಯಾಗಬೇಕು. ಆದಾದ ಮೇಲೆಯೇ ಬೆಳೆಗಳಿಗೆ ಬಳಕೆ ಮಾಡಬಹುದಾಗಿದೆ ಎಂದು ಸರ್ವೋಚ್ಛ ನ್ಯಾಯಾಲಯ ತನ್ನ ತೀರ್ಪಿನಲ್ಲಿ ತಿಳಿಸಿದೆ. ಆದರೆ ನೀರಾವರಿ ಕ್ಷೇತ್ರ ತಮಿಳುನಾಡಿಗಿಂತ ಕಡಿಮೆ ಇರುವುದರಿಂದ ಇಂಥ ಸಮಸ್ಯೆ ಎದುರಾಗುತ್ತಲೇ ಇದೆ. ಈ ಹಿಂದೆ ಮಾಡಿಕೊಂಡ ಸಿಮ್ಲಾ ಒಪ್ಪಂದ ಮತ್ತು ಕೋರ್ಟ್ ಆದೇಶ ಪರಿಪಾಲನೆ ಮಾಡಲೇಬೇಕಾಗಿ ಬಂದಿರುವುದರಿಂದ ರಾಜ್ಯಕ್ಕೆ ಮುಂದಿನ ದಾರಿಯೇ ಇಲ್ಲವೆಂದ ಅವರು, ಸರಿಯಾದ ಅಂಕಿ ಅಂಶಗಳನ್ನು ಮುಂದಿಟ್ಟುಕೊಂಡು ಉಭಯ ರಾಜ್ಯಗಳು ಸೌಹಾರ್ದ ಮಾತುಕತೆಗೆ ಮುಂದಾಗಬೇಕಿದೆ ಎಂದರು.

ಇಂದಿನ ರಾಜಕಾರಣಿಗಳ ಅಕ್ರಮ ಸಂಪಾದನೆ ಬಗ್ಗೆ ವಿದ್ವಾಂಸರೊಬ್ಬರು ಕೇಳಿದ ಪ್ರಶ್ನೆಗೆ, ಉತ್ತರಿಸಿದ ಸಮ್ಮೇಳನಾಧ್ಯಕ್ಷರು, ಅಗತ್ಯಕ್ಕಿಂತ ಹೆಚ್ಚಿನ ಹಣ ಗಳಿಕೆ ಕಳ್ಳತನವಾಗುತ್ತದೆ. ಅಧಿಕಾರ ಹಣ ಗಳಿಸುವುದಕ್ಕಾಗಿ ಅಲ್ಲ, ಬದಲಿಗೆ ಜನಸೇವೆಗೆ ಬಳಕೆಯಾಗಬೇಕು. ಈ ಎಲ್ಲದರ ಹಿಂದೆ ಮತ್ತೆ ಮತ್ತೆ ಗಾಂಧೀಜಿ ತತ್ವಗಳು ನೆನಪಾಗುತ್ತವೆ. ಅವು ಪ್ರಸ್ತುತ ಅನುಷ್ಠಾನಗೊಳ್ಳಬೇಕಿದೆ ಎಂದು ಕೋಚೆ ಹೇಳಿದರು.

ನ್ಯಾಯಾಧೀಶರಾಗಿದ್ದ ವೇಳೆ ಮಹಿಳೆಯರು ಎದುರಿಸುತ್ತಿದ್ದ ಸಮಸ್ಯೆಗಳಿಗೆ ನ್ಯಾಯೋಚಿತ ನ್ಯಾಯ ನೀಡಿದ್ದೇನೆ. ಮಹಿಳಾ ದೌರ್ಜನ್ಯ ಹಾಗೂ ಅತ್ಯಾಚಾರ ಪ್ರಕರಣಗಳ ವಿಚಾರಣೆ ನನ್ನೆದುರಿಗೆ ಬರಲೇ ಇಲ್ಲ, ಆದರೆ ಮಹಿಳೆಯರಿಗೆ ಸಂಬಂಧಿಸಿದ ಪ್ರಕರಣದಲ್ಲಿ ಮಹಿಳೆಯರಿಗೆ ನ್ಯಾಯ ಕಲ್ಪಿಸಿದ್ದಾಗಿ ಡಾ. ಸರಸ್ವತಿ ಚಿಮ್ಮಲಗಿ ಅವರ ಪ್ರಶ್ನೆಗೆ ಉತ್ತರಿಸಿದರು.

ಡಾ. ರಾಜಶೇಖರ ಇಚ್ಚಂಗಿ, ಶಿವಯೋಗಿ, ನಿರಂಜನಾರಾಧ್ಯ, ಶೋಭಾ ಹಿತ್ತಲಮನಿ, ಬಿ. ಎನ್. ರಾಮಸ್ವಾಮಿ, ಇಬ್ರಾಹಿಂ ಮುಲ್ಲಾ, ನರಸಿಂಹಮೂರ್ತಿ, ಚೆಲುವೇಗೌಡ, ಪೂಡೆ ಕೃಷ್ಣ ಮೊದಲಾದವರ ಪ್ರಶ್ನೆಗಳಿಗೆ ಉತ್ತರಗಳು ದೊರೆಯಲೇ ಇಲ್ಲ, ಕೋಚೆ ಇಳಿವಯಸ್ಸು ವೇಳೆಯ ಅಭಾವವೂ ಕಾರಣವಾಗಿತ್ತು..

ಕಸಾಪ ಜಿಲ್ಲಾಧ್ಯಕ್ಷ ಮಲ್ಲಿಕಾರ್ಜುನ ಯಂಡಿಗೇರಿ, ಡಾ. ವಸುಂಧರಾ ಭೂಪತಿ, ಎಂ. ಚಂದ್ರಶೇಖರ, ಸೋಮಶೇಖರ ಬಿಸಲ್ವಾಡಿ, ನೇ.ಬ. ರಾಮಲಿಂಗಶೆಟ್ಟಿ, ಡಾ. ಎಚ್. ಶಶಿಕಲಾಗೌಡ ಮತ್ತಿತರರಿದ್ದರು.

## ಕೇಳಿಸದ ಉತ್ತರ...

ಮಧ್ಯಾಹ್ನ 2ಕ್ಕೆ ನಿಗದಿಯಾಗಿದ್ದ ಸಮ್ಮೇಳನಾಧ್ಯಕ್ಷರೊಂದಿಗಿನ ಸಂವಾದ ಸಂಜೆ 4.45ಕ್ಕೆ ಆರಂಭವಾಯಿತು. ಆರೋಗ್ಯ ಕೈಕೊಟ್ಟದ್ದರಿಂದಾಗಿ ಅಧ್ಯಕ್ಷರ ಧ್ವನಿ ಕ್ಷೀಣಿಸಿತ್ತು. ಅವರ ಈ ಧ್ವನಿಯನ್ನು ಪುಂಖಾನುಪುಂಖವಾಗಿ ವರ್ಧಿಸಬೇಕಿದ್ದ ಧ್ವನಿವರ್ಧಕವೂ ಕೈ ಕೊಟ್ಟದ್ದರಿಂದಾಗಿ ಸಮ್ಮೇಳನಾಧ್ಯಕ್ಷರೊಂದಿಗಿನ ಸಂವಾದ ಸಂಪೂರ್ಣ ವಿಫಲವಾಯಿತು. ಇದರಿಂದಾಗಿ ಸಂವಾದಲ್ಲಿ ಪಾಲ್ಗೊಂಡಿದ್ದ ಸಾಹಿತ್ಯಾಸಕ್ತರು ಅಕ್ಷರಶಃ ನಿರಾಶೆಗೊಂಡರೆ, ಮತ್ತೊಂದೆಡೆ ಮಾಧ್ಯಮಗಳ ಪಾಲಿಗೆ ಮಹತ್ವಪೂರ್ಣವಾಗಿದ್ದ ಸಮ್ಮೇಳನಾಧ್ಯಕ್ಷರೊಂದಿಗಿನ ಸಂವಾದ ಕಾರ್ಯಕ್ರಮದ ಸುದ್ದಿ ಬರೆಯಲು ಪತ್ರಕರ್ತರು ಪರದಾಡಬೇಕಾಯಿತು. ಸಂವಾದದಲ್ಲಿ ಸಮ್ಮೇಳನಾಧ್ಯಕ್ಷರ ವಿದ್ವತ್ಪೂರ್ಣ ವಿಚಾರ ಧಾರೆಗಳನ್ನು ತಿಳಿದುಕೊಳ್ಳಬೇಕೆಂಬ ಆಸೆಗಣ್ಣಿನಿಂದ ಆಗಮಿಸಿದ್ದ ವಿದ್ವಾಂಸರು ಹಾಗೂ ಚಿಂತಕರಿಗೆ ಸಮ್ಮೇಳನಾಧ್ಯಕ್ಷರ ಉತ್ತರ ಸರಿಯಾಗಿ ಕೇಳಲೇ ಇಲ್ಲ, ಹೀಗಾಗಿ ಸಂವಾದ ಅಕ್ಷರಶಃ ಸಪ್ಪೆಯಾಗಿ ಹೊರಹೊಮ್ಮಿತ್ತು. ವಿತನ್ಮಧ್ಯೆ ಸಮ್ಮೇಳನಾಧ್ಯಕ್ಷರ ಧ್ವನಿ ಸಭಿಕರಿಗೆ ಕೇಳದಾದಾಗ, ಓಯ್ ಸೌಂಡ್, ಎಂದು ಧ್ವನಿವರ್ಧಕದ ನಿರ್ವಹಣೆ ಮಾಡುವ ವ್ಯಕ್ತಿಯನ್ನು ಸಾರ್ವಜನಿಕರು ಕಣಕಿದರು. ಆದರೆ ಪ್ರಯೋಜನವಾಗಲಿಲ್ಲ. ಕೋ. ಚೆನ್ನಬಸಪ್ಪನವರ ಧ್ವನಿ ಕ್ಷೀಣಿಸಿದ್ದರಿಂದ ವೇದಿಕೆಯಲ್ಲಿದ್ದ ವಿದ್ವಾಂಸರು ಕೇಳಿದ ಪ್ರಶ್ನೆಗೆ ಸಮರ್ಪಕ ಉತ್ತರ ದೊರೆಯಲೇ ಇಲ್ಲ.

ಕನ್ನಡಪ್ರಭ ಬೆಂಗಳೂರು | ಶುಕ್ರವಾರ 1 | ಫೆಬ್ರವರಿ 2013

# ಲೋಕ ಸುಖ ಕನಸು ಕಂಡಿದ್ದ ಗಾಂಧೀಜಿ



ಹುತಾತ್ಮರ ದಿನಾಚರಣೆಯಲ್ಲಿ ಭಾರತ ಸೇವಾದಳ ಕೇಂದ್ರ ಸಮಿತಿ ಸದಸ್ಯ ಡಾ. ವೂಡೇ, ಪ್ರಧಾನ ಕಾರ್ಯದರ್ಶಿ ವೆಂಕಟೇಶ್ ಹಾಗೂ ವಿದ್ಯಾರ್ಥಿಗಳು ಪ್ರತಿಮೆಗೆ ಮಾಲಾರ್ಪಣೆ ಮಾಡುವ ಮೂಲಕ ಗಾಂಧೀಜಿಗೆ ನಮನ ಸಲ್ಲಿಸಿದರು.

ಬೆಂಗಳೂರು: ಲೋಕೋ ಸಮಸ್ತಾ ಸುಖಿನೋ ಭವಂತು ಎಂಬ ವೇದವಾಕ್ಯದಂತೆ ಎಲ್ಲರೂ ಸುಖಿಯಾಗಿ ಜೀವನ ನಡೆಸಬೇಕೆಂದು ಕನಸು ಕಂಡಿದ್ದ ಮಹಾನ್ ವ್ಯಕ್ತಿ ಮಹಾತ್ಮ ಗಾಂಧೀಜಿ ಎಂದು ಭಾರತ ಸೇವಾದಳ ಕೇಂದ್ರ ಸಮಿತಿ ಸದಸ್ಯ ಡಾ. ವೂಡೇ ಪಿ. ಕೃಷ್ಣ ಹೇಳಿದರು.

ಭಾರತ ಸೇವಾದಳ ಬುಧವಾರ ಅಶೋಕ ಹೋಟೇಲ್‌ನಲ್ಲಿ ಆಯೋಜಿಸಿದ್ದ ಹುತಾತ್ಮರ ದಿನಾಚರಣೆಯಲ್ಲಿ ಗಾಂಧಿ ಸ್ಮಾರಕಕ್ಕೆ ಪುಷ್ಪ ನಮನ ಸಲ್ಲಿಸಿ ಅವರು ಮಾತನಾಡಿದರು. ಈ ಸ್ಥಳದಲ್ಲಿ ಗಾಂಧೀಜಿ ಅವರು ಪ್ರತಿ ದಿನ ಪ್ರಾರ್ಥನೆ ಮಾಡುತ್ತಿದ್ದರು. ಕುಮಾರ ಕೃಪಾ ಅತಿಥಿ ಗೃಹದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಓಗಾಗಿ ಇವರಿಗೆ ಗೌರವ ಸಲ್ಲಿಸಲು ಪ್ರತಿ ವರ್ಷ ನಾವು ಈ ಅಶೋಕ ಹೋಟೇಲ್‌ನಲ್ಲಿ ಸೇರುತ್ತೇವೆ. ಗಾಂಧೀಜಿ ಅವರು ಲೋಕದಲ್ಲಿರುವ ಪ್ರತಿಯೊಬ್ಬರು ಸುಖದಿಂದ ಇರಬೇಕೆಂದು ಕನಸು ಕಾಣುತ್ತಿದ್ದರು ಎಂದರು. ಇಂದು ನಾವು ಕೇವಲ ರಾಜಕೀಯ ವಿಷಯದಿಂದ ಸ್ವಾತಂತ್ರ್ಯರಾಗಿದ್ದೇವೆ. ಆದರೆ, ಇಂದಿಗೂ ನಮಗೆ ನೈತಿಕ

ಮತ್ತು ಆರ್ಥಿಕ ಸ್ವಾತಂತ್ರ್ಯ ದೊರೆತಿಲ್ಲ. ಅಲ್ಲದೆ, ಭಾರತದ ಜನಸಂಖ್ಯಾ ಪ್ರಮಾಣದಲ್ಲಿ ಶೇ.35ರಷ್ಟು ಜನರು ಇಂದಿಗೂ ಬಡತನದಿಂದ ಬಳಲುತ್ತಿದ್ದಾರೆ ಎಂಬುದನ್ನು ನಾವು ಮರೆಯಬಾರದು ಎಂದರು. ಹೋಟೇಲ್ ಲಲಿತ್ ಅಶೋಕ ಪ್ರಧಾನ ವ್ಯವಸ್ಥಾಪಕ ಅಮಿತ್ ಸ್ಯಾಮ್ಸನ್ ಮಾತನಾಡಿ, ಗಾಂಧೀಜಿ ಅವರ ಹೆಸರಿನಲ್ಲಿ ಪ್ರಾರ್ಥನೆ ಮಾಡುತ್ತಿರುವುದು ಸಂತೋಷದ ವಿಷಯ. ಗಾಂಧೀಜಿ ಅವರು ಪ್ರತಿ ಸಂಜೆ

ಈ ಸ್ಥಳದಲ್ಲಿ ಕುಳಿತು ಪ್ರಾರ್ಥನೆ ಮಾಡುತ್ತಿದ್ದರು ಎಂಬುವುದು ಇತಿಹಾಸ. ಪ್ರತಿ ವರ್ಷ ಈ ರೀತಿ ಕಾರ್ಯಕ್ರಮ ಮಾಡುವ ಮೂಲಕ ಅವರ ನೆನಪು ಮಾಡಿಕೊಳ್ಳುವುದು ಒಳ್ಳೆಯ ಕೆಲಸ ಎಂದರು. ಈ ಸಮಾರಂಭದಲ್ಲಿ ಭಾರತ ಸೇವಾದಳ ಕೇಂದ್ರ ಸಮಿತಿ ಸದಸ್ಯ ಬಿ.ಕೆ. ವೆಂಕಟ್ ನಾರಾಯಣ್, ಪ್ರಧಾನ ಕಾರ್ಯದರ್ಶಿ ಬಿ.ಸಿ. ವೆಂಕಟೇಶ್ ಭಾಗವಹಿಸಿದ್ದರು.

ಈ ಸಂಜೆ

ಗುರುವಾರ, 31-01-2013



ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್ ವತಿಯಿಂದ ಕಾಲೇಜು ಆವರಣದಲ್ಲಿ ಮಾಜಿ ಮೇಯರ್ ನಂಜಪ್ಪ ಸ್ಮರಣಾರ್ಥ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರದಲ್ಲಿ ಬೆಂಗಳೂರು ದೂರದರ್ಶನ ಕೇಂದ್ರದ ಹಿರಿಯ ಉಪನಿರ್ದೇಶಕ ಮಹೇಶ್ ಜೋಷಿ, ರೆಡ್‌ಕ್ರಾಸ್‌ನ ರಾಜುಚಂದ್ರಶೇಖರ್, ಟ್ರಸ್ಟ್‌ನ ಕಾರ್ಯದರ್ಶಿ ವೂಡೆಪಿ ಕೃಷ್ಣ ಮತ್ತಿತರರು ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ವಿದ್ಯಾರ್ಥಿಗಳು ಸ್ವಯಂಪ್ರೇರಿತವಾಗಿ ರಕ್ತದಾನ ಮಾಡಿದರು.

ಪ್ರಜಾವಾಣಿ
ಗುರುವಾರ 31ನೇ ಜನವರಿ 2013



ಸರ್ವೋದಯ ದಿನಾಚರಣೆ ಪ್ರಯುಕ್ತ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಹೊ.ಶ್ರೀನಿವಾಸಯ್ಯ, ಸುಮಂಗಲಿ ಸೇವಾಶ್ರಮದ ಸುಶೀಲಮ್ಮ, ಗಾಂಧಿ ಪೀಸ್ ಫೌಂಡೇಶನ್ ಅಧ್ಯಕ್ಷ ವೂಡೇ ಪಿ. ಕೃಷ್ಣ ಮತ್ತಿತರರು ನಗರದ ಆನಂದರಾವ್ ವೃತ್ತದ ಬಳಿಯ ಮಹಾತ್ಮ ಗಾಂಧಿ ಪ್ರತಿಮೆಗೆ ಬುಧವಾರ ಗೌರವ ನಮನ ಸಲ್ಲಿಸಿದರು – ಪ್ರಜಾವಾಣಿ ಚಿತ್ರ

ಈ ಸಂಜೆ

ಗುರುವಾರ, 31-01-2013



ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್ ವತಿಯಿಂದ ಕಾಲೇಜು ಆವರಣದಲ್ಲಿ ಮಾಜಿ ಮೇಯರ್ ನಂಜಪ್ಪ ಸ್ಮರಣಾರ್ಥ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರದಲ್ಲಿ ಬೆಂಗಳೂರು ದೂರದರ್ಶನ ಕೇಂದ್ರದ ಹಿರಿಯ ಉಪನಿರ್ದೇಶಕ ಮಹೇಶ್‌ಜೋಷಿ, ರೆಡ್‌ಕ್ರಾಸ್‌ನ ರಾಜುಚಂದ್ರಶೇಖರ್, ಟ್ರಸ್ಟ್‌ನ ಕಾರ್ಯದರ್ಶಿ ವೂಡೆಪಿ ಕೃಷ್ಣ ಮತ್ತಿತರರು ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ವಿದ್ಯಾರ್ಥಿಗಳು ಸ್ವಯಂಪ್ರೇರಿತವಾಗಿ ರಕ್ತದಾನ ಮಾಡಿದರು.

ಪ್ರಜಾವಾಣಿ ಮಂಗಳವಾರ 15 ಜನವರಿ 2013



ಶೇಷಾದ್ರಿಪುರಂ ಸಂಯುಕ್ತ ಪದವಿ ಪೂರ್ವ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭದಲ್ಲಿ ನಿರ್ದೇಶಕ ಟಿ.ಎಸ್. ನಾಗಾಭರಣರವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಹಾಗೂ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಇದ್ದಾರೆ.

ಪ್ರಜಾವಾಣಿ

ಭಾನುವಾರ 6 ನೇ ಜನವರಿ 2013

# 'ಯುವಕರಿಗೆ ನೈತಿಕ ಶಿಕ್ಷಣ ನೀಡಿ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಮಹಿಳೆಯರ ಮೇಲಿನ ದೌರ್ಜನ್ಯವನ್ನು ತಡೆಗಟ್ಟಲು ಕಾನೂನಿನ ಜಾರಿಯ ಜತೆಗೆ ಯುವಕರಿಗೆ ನೈತಿಕ ಶಿಕ್ಷಣವನ್ನು ನೀಡಬೇಕಾದ ಅನಿವಾರ್ಯತೆ ಇದೆ' ಎಂದು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಹೇಳಿದರು.

ಜೆ.ಎಸ್.ವರ್ಮಾ ಸಮಿತಿಗೆ ಸಲಹೆಗಳನ್ನು ನೀಡಲು ಗಾಂಧಿ ಸ್ಮಾರಕ ನಿಧಿ, ಎಂ.ವಿ.ಆರ್.ಫೌಂಡೇಷನ್, ಎಚ್.ಎಸ್.ಆರ್. ಕಾನೂನು ಫೌಂಡೇಷನ್ ಮತ್ತಿತರ ಸಂಸ್ಥೆಗಳ ಸಹಯೋಗದಲ್ಲಿ ನಗರದಲ್ಲಿ ಈಚೆಗೆ ನಡೆದ ದುಂಡು ಮೇಜಿನ ಸಭೆಯಲ್ಲಿ ಅವರು ಮಾತನಾಡಿದರು.

ಯುವಕರು ದೇಶದ ಸಂಸ್ಕೃತಿಯನ್ನು ಮರೆಯುತ್ತಿದ್ದು, ಸಮಾಜದಲ್ಲಿ ಅವರ ವರ್ತನೆ ಬದಲಾಗುತ್ತಿದೆ. ಮಹಿಳೆಯರ ಮೇಲಿನ ಅತ್ಯಾಚಾರದಂತಹ ಪ್ರಕರಣಗಳನ್ನು ತಡೆಗಟ್ಟಲು ಕಠಿಣ ಕಾನೂನು ಜಾರಿಗೆ ತರುವ ಜತೆಗೆ ಯುವಕರಿಗೆ ಶಾಲೆ–ಕಾಲೇಜುಗಳಲ್ಲಿ ನೈತಿಕ ಶಿಕ್ಷಣವನ್ನು ನೀಡಬೇಕು ಎಂದರು.

ವಿಧಾನ ಪರಿಷತ್ ಸದಸ್ಯ ಎಂ.ವಿ.ರಾಜಶೇಖರನ್ ಮಾತನಾಡಿ, 'ದೇಶದಲ್ಲಿ ಕಾನೂನಿಗೆ ಕೊರತೆ ಇಲ್ಲ. ಆದರೆ ಇಂತಹ ಪ್ರಕರಣಗಳಲ್ಲಿ ಕಾನೂನು ಜಾರಿಗೆ ತರುವುದು ಸಾಧ್ಯವಾಗುತ್ತಿಲ್ಲ. ಸಾರ್ವಜನಿಕರು ಕಾನೂನಿನ ಜತೆಗೆ ನೈತಿಕ ಜವಾಬ್ದಾರಿಯನ್ನು ನಿರ್ವಹಿಸಿದಾಗ ದೌರ್ಜನ್ಯವನ್ನು ತಡೆಗಟ್ಟಲು ಸಾಧ್ಯ' ಎಂದರು.

ವಕೀಲರ ಸಂಘದ ಅಧ್ಯಕ್ಷ ಕೆ.ಎನ್.ಸುಬ್ಬಾರೆಡ್ಡಿ ಮಾತನಾಡಿ, ಮಾಧ್ಯಮಗಳಲ್ಲಿ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯದ ವೈಭವೀಕರಣ ಮತ್ತು ಸೆನ್ಸಾರ್ ಮಂಡಲಿಯ ನಿಷ್ಕ್ರಿಯತೆಯಿಂದಾಗಿ ಸಿನಿಮಾಗಳಲ್ಲಿ ಮಹಿಳೆಯರನ್ನು ಅಶ್ಲೀಲವಾಗಿ ಚಿತ್ರಿಸಲಾಗುತ್ತಿರುವುದರಿಂದ ಮಹಿಳೆಯರ ಮೇಲಿನ ದೌರ್ಜನ್ಯಗಳು ಹೆಚ್ಚುತ್ತಿವೆ ಎಂದರು.

ಗಾಂಧೀಜಿ ಅವರ ಪರಿಕಲ್ಪನೆಯಲ್ಲಿ ಮಹಿಳೆಯರಿಗೆ ನೈತಿಕ ಸ್ವಾತಂತ್ರ್ಯ ಸಿಗಬೇಕು. ಸಮಾಜದ ಯಾವ ನಾಯಕರೂ ಕೂಡ ಮಹಿಳೆಗೆ ನೈತಿಕ ಸ್ವಾತಂತ್ರ್ಯ ನೀಡುವಲ್ಲಿ ಗಮನವಹಿಸಲಿಲ್ಲ. ಎಲ್ಲರೂ ತಮ್ಮ ಹಕ್ಕಿನ ಬಗ್ಗೆ ಹೋರಾಡುತ್ತಾರೆ. ಆದರೆ, ತಾವು ನಿರ್ವಹಿಸಬೇಕಾದ ಕರ್ತವ್ಯವನ್ನು ಮರೆಯುತ್ತಿದ್ದಾರೆ ಎಂದು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ವ್ಯವಸ್ಥಿತ ಕಾಲಮಿತಿಯಲ್ಲಿ ತನಿಖೆ ನಡೆಸಬೇಕು, ಅತ್ಯಾಚಾರದಂತಹ ಪ್ರಕರಣಗಳ ತನಿಖೆಗೆ ಉನ್ನತ ಸಮಿತಿಯನ್ನು ನೇಮಕ ಮಾಡಬೇಕು, ಮೂರು ತಿಂಗಳ ಒಳಗೆ ತನಿಖೆಯನ್ನು ಪೂರ್ಣಗೊಳಿಸಬೇಕು, ಅತ್ಯಾಚಾರಿಗಳಿಗೆ ಗರಿಷ್ಠ ಪ್ರಮಾಣದ ಶಿಕ್ಷೆ ವಿಧಿಸಬೇಕು, ದೌರ್ಜನ್ಯಕ್ಕೊಳಗಾದ ಮಹಿಳೆಯರಿಗೆ ಪರಿಹಾರ ಮತ್ತು ಪುನರ್ವಸತಿ ಕಲ್ಪಿಸಬೇಕು ಎಂಬ ಸಲಹೆಗಳನ್ನು ವರ್ಮಾ ಸಮಿತಿಯಲ್ಲಿ ಪರಿಗಣಿಸಬೇಕು ಎಂದು ಸಭೆಯಲ್ಲಿ ಚರ್ಚಿಸಲಾಯಿತು.

ಎಚ್.ಎಸ್.ಆರ್.ಕಾನೂನು ಫೌಂಡೇಷನ್‌ನ ಕಾರ್ಯದರ್ಶಿ ಎಸ್.ವಿ.ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಮೂರ್ತಿ ಟಿ.ಎನ್.ಮಂಜುಳಾದೇವಿ, ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್ ಮತ್ತಿತರರು ಭಾಗವಹಿಸಿದ್ದರು.



ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಶುಕ್ರವಾರ ಗಾಂಧಿ ಶಾಂತಿ ಪ್ರತಿಷ್ಠಾನ, ಎಂವಿಆರ್ ಪ್ರತಿಷ್ಠಾನ ಮತ್ತಿತರ ಸಂಸ್ಥೆಗಳು ಅತ್ಯಾಚಾರ ಪ್ರಕರಣಕ್ಕೆ ಸಂಬಂಧಿಸಿದಂತೆ ನಡೆಸಿದ ದುಂಡು ಮೇಜಿನ ಸಭೆಯಲ್ಲಿ ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್, ವೂಡೇ ಪಿ. ಕೃಷ್ಣ, ಸುಬ್ಬಾರೆಡ್ಡಿ, ಲೀಲಾದೇವಿ ಆರ್. ಪ್ರಸಾದ್, ಬಿ.ವಿ. ಆಚಾರ್ಯ ಉಪಸ್ಥಿತರಿದ್ದರು.

# ಲೈಂಗಿಕ ದೌರ್ಜನ್ಯ ತಡೆಗೆ ಕಾನೂನು ತಿದ್ದುಪಡಿ ಅಗತ್ಯ

## ದುಂಡುಮೇಜಿನ ಸಭೆ ನಿರ್ಧಾರ

ಬೆಂಗಳೂರು,ಜ;4 ಮಹಿಳೆಯರ ಮೇಲೆ ಲೈಂಗಿಕ ದೌರ್ಜನ್ಯ ಪ್ರಕರಣ ಹೆಚ್ಚಾಗುತ್ತಿರುವ ಬಗ್ಗೆ ಕಾರಣಗಳನ್ನು ಕಂಡುಹಿಡಿಯಲು ನಿವೃತ್ತ ಹೈಕೋರ್ಟ್ ನ್ಯಾಯಮೂರ್ತಿಗಳ ನೇತೃತ್ವದಲ್ಲಿ ಉನ್ನತ ಮಟ್ಟದ ಸಮಿತಿ ರಚನೆ ಸೇರಿದಂತೆ ಮತ್ತಿತರ ಸಾಮಾಜಿಕ ಕಾಳಜಿಯುಳ್ಳ ಸಲಹೆಗಳನ್ನು ನಿವೃತ್ತ ನ್ಯಾಯಮೂರ್ತಿ ಜೆ.ಎಸ್.ವರ್ಮಾ ಸಮಿತಿಗೆ ನೀಡಲು ಶುಕ್ರವಾರ ಇಲ್ಲಿ ನಡೆದ ಗಣ್ಯರು ಪಾಲ್ಗೊಂಡಿದ್ದ ದುಂಡುಮೇಜಿನ ಸಭೆಯಲ್ಲಿ ನಿರ್ಧರಿಸಲಾಗಿದೆ.

ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನಲ್ಲಿ ಗಾಂಧಿ ಪೀಸ್ ಫೌಂಡೇಶನ್, ಎಂ.ವಿ.ಆರ್. ಫೌಂಡೇಶನ್, ಇನ್‌ಸ್ಟಿಟ್ಯೂಟ್ ಆಫ್ ಪಾಲಿಟಿಕಲ್ ಎಕ್ಸೆಲೆನ್ಸ್ ಬೆಂಗಳೂರು, ಹೆಚ್‌ಎಸ್‌ಆರ್ ಲಾ ಫೌಂಡೇಶನ್ ಸಂಘ ಸಂಸ್ಥೆಗಳು ನಡೆಸಿದ ದುಂಡುಮೇಜಿನ ಸಭೆಯಲ್ಲಿ ಮಹಿಳೆಯರ ರಕ್ಷಣೆ ಹಾಗೂ ಸುರಕ್ಷತೆಗೆ ಸಂಬಂಧಿಸಿದಂತೆ ಅಗತ್ಯ ಕ್ರಿಮಿನಲ್ ಕಾನೂನು ತಿದ್ದುಪಡಿಗೊಳಿಸಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು, ಅತ್ಯಾಚಾರ ಪ್ರಕರಣಗಳನ್ನು ಮೂರು ತಿಂಗಳೊಳಗೆ ಇತ್ಯರ್ಥಗೊಳಿಸುವುದು, ಇಂತಹ ಹೀನಾಯ ಕೃತ್ಯದಲ್ಲಿ ತೊಡಗುವವರಿಗೆ ಜೀವಾವಧಿ ಶಿಕ್ಷೆಯಿಂದ ಮರಣದಂಡನೆ ಶಿಕ್ಷೆ, ಪೊಲೀಸ್ ವ್ಯವಸ್ಥೆಯ ಸೂಕ್ಷ್ಮತೆಯ ಪಾಲುದಾರಿಕೆ ಒಳಗೊಂಡಂತೆ 11 ಸಲಹೆ ನೀಡಲಾಗಿದೆ. ಅತ್ಯಾಚಾರ ಪ್ರಕರಣಕ್ಕೆ ಸಂಬಂಧಿಸಿದ ಹೇಳಿಕೆಗಳು ತನಿಖಾಧಿಕಾರಿಗಳ ಮುಂದೆ ಬದಲಾಗಿ ಜ್ಯುಡಿಶಿಯಲ್ ಮ್ಯಾಜಿಸ್ಟ್ರೇಟ್ ಮುಂದೆ ಹೇಳಬೇಕು. ಅತ್ಯಾಚಾರಕ್ಕೆ ತುತ್ತಾದವರಿಗೆ ಪರಿಹಾರ ಧನ ಹಾಗೂ ಪರ್ಯಾಯ ವ್ಯವಸ್ಥೆಯನ್ನು ಸರ್ಕಾರ ನೋಡಿಕೊಳ್ಳಬೇಕು. ಶಾಲಾ ಕಾಲೇಜುಗಳಲ್ಲಿ ನೀತಿಪಾಠ ಪರಿಚಯ, ಹಾಗೆಯೇ ಚುಡಾಯಿಸುವಿಕೆ ಮತ್ತಿತರ ಬಗ್ಗೆಯೂ ಕಠಿಣ ಕ್ರಮ. ಎಲ್ಲಾ ಕ್ಲಾಸ್ 1 ಹಾಗೂ ಕ್ಲಾಸ್ 2 ಅಧಿಕಾರಿಗಳಿಗೆ ಸಾರ್ವಜನಿಕ ಸ್ಥಳದಲ್ಲಿ ಮಹಿಳಾ ದೌರ್ಜನ್ಯ ತಡೆಗಟ್ಟುವ ನಿಟ್ಟಿನಲ್ಲಿ ಕಾನೂನು ಅಧಿಕಾರ ನೀಡುವ ಬಗ್ಗೆಯೂ ಸಲಹೆ ನೀಡಲಾಗಿದೆ. ಸಭೆಯಲ್ಲಿ ಮಾತನಾಡಿದ ಹೈಕೋರ್ಟ್‌ನ ಮಾಜಿ ಅಡ್ವೋಕೇಟ್ ಜನರಲ್ ಬಿ.ವಿ.ಆಚಾರ್ಯ, ಮಾಧ್ಯಮಗಳು ಹೆಚ್ಚಿನ ಜವಾಬ್ದಾರಿ ವಹಿಸಬೇಕು. ಚಲನಚಿತ್ರ ಹಾಗೂ ಮಾಧ್ಯಮಗಳು ಎಂದು ಬೇರೆಯಾಗಿ ವಿಂಗಡಿಸಬೇಕಾಗಿದೆ. ಅದರಂತೆಯೇ ಬಿಪಿಒ ಗಳಲ್ಲಿ ಕಾರ್ಯನಿರ್ವಹಿಸುವ ಹೆಣ್ಣುಮಕ್ಕಳಿಗೆ ಹೆಚ್ಚಿನ ರಕ್ಷಣೆ ವಹಿಸುವತ್ತ ಗಮನಹರಿಸಬೇಕು ಎಂದರು. ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್ ಮಾತನಾಡಿ ಎಲ್ಲಾ ಸಲಹೆಗಳಂತೆ ಇವು ಕೂಡಾ ಕಸದಬುಟ್ಟಿಗೆ ಹೋಗುವಂತೆ ಆಗಬಾರದು. ಕಳುಹಿಸಿರುವ ಸಲಹೆ ಗಂಭೀರವಾಗಿ ಸ್ವೀಕರಿಸಿ ಅನುಷ್ಠಾನ ಮಾಡುವಂತಾಗಬೇಕೆಂದರು.

ಕೇಂದ್ರ ಮಾಜಿ ಸಚಿವ ಎಂ.ವಿ.ರಾಜಶೇಖರನ್ ಮಾತನಾಡಿ ನಮ್ಮಲ್ಲಿ ಕಾನೂನಿನ ಕೊರತೆಯಿಲ್ಲ. ಆದರೆ ಸಾಕಷ್ಟು ಅನುಷ್ಠಾನದ ಕೊರತೆಯಿದೆ. ಸನ್ನಡತೆ ,ಸಂಸ್ಕಾರ ಯುವಜನರಲ್ಲಿ ಇರಬೇಕಾದ ಅಗತ್ಯವಿದೆ ಎಂದು ಪ್ರತಿಪಾದಿಸಿದರು.

ಹಿರಿಯ ಗಾಂಧಿವಾದಿ ಹೋ.ಶ್ರೀನಿವಾಸಯ್ಯ ಮಾತನಾಡಿ ಶಿಕ್ಷಣದಲ್ಲಿ ನೀತಿಪಾಠ ಅಳವಡಿಸುವ ಅಗತ್ಯತೆಯಿದೆ ಎಂದರು.

ಸಭೆಯಲ್ಲಿ ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ, ಕೆ.ಎನ್.ಸುಬ್ಬಾರೆಡ್ಡಿ, ಗಾಂಧಿಪೀಸ್ ಫೌಂಡೇಶನ್ ಅಧ್ಯಕ್ಷ ವೂಡೇ ಪಿ.ಕೃಷ್ಣ, ನಿವೃತ್ತ ನ್ಯಾಯಮೂರ್ತಿ ಟಿ.ಎನ್.ಮಂಜುಳಾದೇವಿ, ಹಿರಿಯ ವಕೀಲರ ಎಸ್.ಪಿ.ಕುಲಕರ್ಣಿ, ಹೆಚ್‌ಎಸ್‌ಆರ್ ಲಾ ಫೌಂಡೇಶನ್ ಅಧ್ಯಕ್ಷ ಹೆಚ್.ಎಸ್.ರೇಣುಕಾಪ್ರಸಾದ್, ನೇಶನ್ ಟುಡೇಯ ವಿಜಯ್ ಗ್ರೋವರ್ ಮತ್ತಿತರರು ಪಾಲ್ಗೊಂಡಿದ್ದರು.

ವಿಜಯವಾಣಿ
BANGALORE
ಬೆಂಗಳೂರು ಸಿಟಿ ಎಕ್ಸ್‌ಪ್ರೆಸ್
ಶನಿವಾರ 5 ಜನವರಿ 2013



# ಅತ್ಯಾಚಾರಿಗಳಿಗೆ ಜಾಮೀನು ಬೇಡ

## ದುಂಡು ಮೇಜಿನ ಸಭೆ ನಿರ್ಣಯ ■ ವರ್ಮಾ ಸಮಿತಿಗೆ 10 ಸಲಹೆ ಸಲ್ಲಿಸಲು ತೀರ್ಮಾನ

ಬೆಂಗಳೂರು: ಅತ್ಯಾಚಾರ ಮತ್ತು ಲೈಂಗಿಕ ಕಿರುಕುಳ ಪ್ರಕರಣಗಳಿಗೆ ಸಂಬಂಧಿಸಿದಂತೆ ಅಪರಾಧ ಕಾನೂನನ್ನು ಇನ್ನಷ್ಟು ಬಿಗಿಗೊಳಿಸುವುದು ಮತ್ತು ಆರೋಪಿಗಳಿಗೆ ಜಾಮೀನು ನಿರಾಕರಿಸುವುದೂ ಸೇರಿದಂತೆ ಒಟ್ಟು 10 ಸಲಹೆಗಳನ್ನು ಕೇಂದ್ರ ಸರ್ಕಾರ ನೇಮಿಸಿರುವ ನ್ಯಾಯಮೂರ್ತಿ ಜೆ.ಸಿ. ವರ್ಮಾ ಸಮಿತಿಗೆ ಸಲ್ಲಿಸಲು ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಇತರ ಸಂಘಟನೆಗಳ ದುಂಡು ಮೇಜಿನ ಸಭೆ ತೀರ್ಮಾನಿಸಿದೆ.

ಈಗಿರುವ ಕಾನೂನು ಸರಿಯಾಗಿದೆ. ಆದರೆ, ಅದರ ಅನುಷ್ಠಾನ ಸರಿ ಇಲ್ಲ. ಭಾವೋದ್ವೇಗಕ್ಕೆ ಒಳಗಾಗಿ ಮರಣದಂಡನೆ ನೀಡಬೇಕು, ಕತ್ತರಿಸಬೇಕು ಎಂಬ ಮಾತುಗಳು ಕೇಳಿ ಬರುತ್ತಿವೆ. ಇದು ಸರಿಯಲ್ಲ. ಕಠಿಣ ಶಿಕ್ಷೆ ನೀಡಬೇಕು

– ಬಿ.ವಿ. ಆಚಾರ್ಯ, ಮಾಜಿ ಅಡ್ವೊಕೇಟ್ ಜನರಲ್

ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಶುಕ್ರವಾರ ಏರ್ಪಡಿಸಿದ್ದ ಸಭೆಯಲ್ಲಿ ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರನ್, ಗಾಂಧಿ ಸ್ಮಾರಕ ನಿಧಿಯ ಹೋ. ಶ್ರೀನಿವಾಸಯ್ಯ, ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ಕೆ.ಎನ್. ಸುಬ್ಬಾರೆಡ್ಡಿ, ಮಾಜಿ ಅಡ್ವೊಕೇಟ್ ಜನರಲ್ ಬಿ.ವಿ.ಆಚಾರ್ಯ ಮತ್ತಿತರ ಗಣ್ಯರು ಭಾಗವಹಿಸಿದ್ದರು.

ಮಹಿಳೆಯರಿಗೆ ರಕ್ಷಣೆ ನೀಡುವ ಸಂಬಂಧ ಕೇಂದ್ರ ಸರ್ಕಾರ ರಚಿಸಿರುವ ಸಮಿತಿಗೆ ಈ ಕೆಳಕಂಡ ಪ್ರಮುಖ ಸಲಹೆಗಳನ್ನು ನೀಡಲು ಸಭೆಯಲ್ಲಿ ನಿರ್ಧರಿಸಲಾಯಿತು.




ಶುಕ್ರವಾರ ನಗರದಲ್ಲಿ ಏರ್ಪಡಿಸಿದ್ದ ದುಂಡು ಮೇಜಿನ ಸಭೆಯಲ್ಲಿ ಕೇಂದ್ರದ ಮಾಜಿ ಸಚಿವ ರಾಜಶೇಖರನ್, ವಕೀಲರ ಸಂಘದ ಅಧ್ಯಕ್ಷ ಕೆ.ಎನ್. ಸುಬ್ಬಾರೆಡ್ಡಿ, ಮಾಜಿ ಅಡ್ವೊಕೇಟ್ ಜನರಲ್ ಬಿ.ವಿ.ಆಚಾರ್ಯ ಮತ್ತಿತರರು ಭಾಗವಹಿಸಿದ್ದರು.

### ಟಿವಿಗಳಲ್ಲಿ ಅಶ್ಲೀಲತೆ, ಹಿಂಸೆ ವೈಭವೀಕರಣ

ಟೆಲಿವಿಷನ್‌ಗಳಲ್ಲಿ ಬರುವ ಬಹುಪಾಲು ಕಾರ್ಯಕ್ರಮಗಳು ತೀರಾ ಅಸಭ್ಯವಾಗಿರುತ್ತವೆ. ಮನೆ ಮಂದಿ ಒಟ್ಟಿಗೆ ಕುಳಿತು ಟಿವಿ ಕಾರ್ಯಕ್ರಮ ವೀಕ್ಷಿಸುವ ಮಟ್ಟದಲ್ಲಿ ಇರುವುದಿಲ್ಲ. ಅಶ್ಲೀಲತೆ, ಅಸಭ್ಯತೆ, ಹಿಂಸೆಯ ವೈಭವೀಕರಣ ಹೆಚ್ಚಾಗಿದೆ. ಇದು ಸಮಾಜವನ್ನು ಕಲುಷಿತಗೊಳಿಸುತ್ತಿದೆ. ಇದಕ್ಕೆ ಕಡಿವಾಣ ಹಾಕಬೇಕು ಎಂದು ಹೈಕೋರ್ಟ್ ನ್ಯಾಯವಾದಿ ಎಸ್.ಪಿ. ಕುಲಕರ್ಣಿ ಒತ್ತಾಯಿಸಿದರು. ಇದಕ್ಕೆ ಹಲವು ಸದಸ್ಯರು ಧ್ವನಿಗೂಡಿಸಿದರು. ವಕೀಲರ ಸಂಘದ ಅಧ್ಯಕ್ಷ ಕೆ.ಎನ್. ಸುಬ್ಬಾರೆಡ್ಡಿ ಸಹಮತ ವ್ಯಕ್ತಪಡಿಸಿ, ಸಿನಿಮಾಗಳು ಕೂಡ ತೀರಾ ಅಸಭ್ಯವಾಗಿರುತ್ತವೆ. ಸೆನ್ಸಾರ್ ಮಂಡಳಿ ಕೆಟ್ಟ ಸಿನಿಮಾಗಳಿಗೆ ಹೇಗೆ ಅನುಮತಿ ನೀಡುತ್ತವೆ ಎಂದು ಅಚ್ಚರಿ ವ್ಯಕ್ತಪಡಿಸಿದರು.

### ಹತ್ತು ಸಲಹೆಗಳು

1. ಅತ್ಯಾಚಾರ ಮತ್ತು ಲೈಂಗಿಕ ಕಿರುಕುಳಗಳ ವಿರುದ್ಧ ಕ್ರಿಮಿನಲ್ ಕಾನೂನನ್ನು ಮತ್ತಷ್ಟು ಕಠಿಣಗೊಳಿಸಿ, ಕಟ್ಟುನಿಟ್ಟಾಗಿ ಜಾರಿ ಮಾಡಬೇಕು.
2. ಅತ್ಯಾಚಾರ, ಲೈಂಗಿಕ ಕಿರುಕುಳದ ಪ್ರಕರಣಗಳು ಹೆಚ್ಚಾಗಲು ಕಾರಣ ತಿಳಿದುಕೊಳ್ಳಲು ಹೈಕೋರ್ಟ್‌ನ ನಿವೃತ್ತ ನ್ಯಾಯಾಧೀಶರೊಬ್ಬರಿಂದ ಉನ್ನತಾಧಿಕಾರ ಸಮಿತಿ ರಚಿಸಬೇಕು.
3. ಅತ್ಯಾಚಾರ ಪ್ರಕರಣವನ್ನು 3 ತಿಂಗಳೊಳಗೆ ಇತ್ಯರ್ಥಗೊಳಿಸಬೇಕು. ಬಾಕಿ ಕೇಸುಗಳನ್ನು ತ್ವರಿತವಾಗಿ ವಿಲೇವಾರಿಗೊಳಿಸಬೇಕು.
4. ಅಪರಾಧಿಗಳಿಗೆ ಜೀವಾವಧಿಯಿಂದ ಮರಣದಂಡನೆಯಂತಹ ಶಿಕ್ಷೆ ವಿಧಿಸಬೇಕು
5. ಪೊಲೀಸ್ ಪಡೆಯನ್ನು ಹೆಚ್ಚು ಸಂವೇದನಾಶೀಲರನ್ನಾಗಿಸಬೇಕು. ಯಾವುದೇ ಲೋಪ ಆದರೂ ಅದಕ್ಕೆ ಪೊಲೀಸ್ ಅಧಿಕಾರಿಯನ್ನೇ ಹೊಣೆ ಮಾಡಬೇಕು.
6. ಸೆಕ್ಷನ್ 164 ರ ಪ್ರಕಾರ ಜುಡಿಷಿಯಲ್ ಮ್ಯಾಜಿಸ್ಟ್ರೇಟರ ಮುಂದೆ ಸಾಕ್ಷ್ಯಗಳ ಹೇಳಿಕೆ ದಾಖಲಿಸುವಂತಾಗಬೇಕು.
7. ಅನ್ಯಾಯಕ್ಕೊಳಗಾದವರಿಗೆ ಸೂಕ್ತ ರೀತಿಯಲ್ಲಿ ಪರಿಹಾರ ನೀಡುವುದರ ಜತೆಗೆ, ಪುನರ್‌ವ್ಯವಸ್ಥೆಗೂ ಅವಕಾಶ ಕಲ್ಪಿಸಬೇಕು.
8. ವಿದ್ಯಾಸಂಸ್ಥೆಗಳಲ್ಲಿ ನೈತಿಕ ಶಿಕ್ಷಣ ಜಾರಿ ತರುವುದರ ಜತೆ ಚಿಕ್ಕಂದಿನಲ್ಲೇ ನೈತಿಕ ಗುಣಮಟ್ಟ ಹೆಚ್ಚಿಸುವ ಕಾರ್ಯ ಆಗಬೇಕು.
9. ಕಾಲೇಜುಗಳು, ಬಡಾವಣೆಗಳಲ್ಲಿ ಹೆಣ್ಣು ಮಕ್ಕಳನ್ನು ಚುಡಾಯಿಸುವುದನ್ನು ತಡೆಗಟ್ಟುವುದೂ ಸೇರಿದಂತೆ ಸಮಾಜದಲ್ಲಿ ಮಹಿಳೆಯರು ನೆಮ್ಮದಿಯ ಬದುಕುವಂತಹ ವಾತಾವರಣ ಸೃಷ್ಟಿಸಬೇಕು.
10. ಸಾರ್ವಜನಿಕ ಸ್ಥಳಗಳಲ್ಲಿ ಮಹಿಳೆಯರಿಗೆ ಕಿರುಕುಳ ನೀಡಿದರೆ ಅಂತಹವರ ವಿರುದ್ಧ ತಕ್ಷಣ ಕ್ರಮ ತೆಗೆದುಕೊಳ್ಳಲು ಕ್ಲಾಸ್ 1 ಮತ್ತು 2 ಶ್ರೇಣಿ ಅಧಿಕಾರಿಗಳಿಗೆ ಅರೆ ನ್ಯಾಯಾಂಗದ ಅಧಿಕಾರ ನೀಡಬೇಕು



ಮತ್ತಿಕೆರೆಯ ಬಳಿಯ ಜೆ.ಪಿ.ಪಾರ್ಕ್ ವಾರ್ಡ್‌ನ ಬಿಬಿಎಂಪಿ ಪ್ರೌಢಶಾಲೆ ಹಾಗೂ ಪದವಿಪೂರ್ವ ಕಾಲೇಜಿನಲ್ಲಿ ನಡೆದ ವಾರ್ಷಿಕೋತ್ಸವ ಕಾರ್ಯಕ್ರಮವನ್ನು ಶಾಸಕ ಮುನಿರತ್ನ ಉದ್ಘಾಟಿಸಿದರು. ಮೇಲ್ಮನೆ ಸದಸ್ಯ ಎಂ.ಆರ್.ಸೀತಾರಾಮ್, ಸ್ಥಳೀಯ ಪಾಲಿಕೆ ಸದಸ್ಯ ಬಿ.ಆರ್.ನಂಜುಂಡಪ್ಪ, ಬಿಬಿಎಂಪಿ ಶಿಕ್ಷಣ-ಕ್ರೀಡೆ ಸ್ಥಾಯಿ ಸಮಿತಿ ಅಧ್ಯಕ್ಷ ಕೋದಂಡರೆಡ್ಡಿ, ಸಹಾಯಕ ಆಯುಕ್ತ ಡಾ.ಬಿ.ಎನ್.ಮಂಜುನಾಥಸ್ವಾಮಿ, ಡಾ.ವೂಡೇ ಪಿ. ಕೃಷ್ಣ ಮತ್ತಿತರರು ಪಾಲ್ಗೊಂಡಿದ್ದರು.

# ನಾಡೋಜ ಪಾ.ಪು. ಉಪನ್ಯಾಸ




3.12.2012ರಂದು ಎಚ್.ಎಸ್.ಆರ್.ಪ್ರಸಾದ್ ಪ್ರತಿಷ್ಠಾನದ ಆಶ್ರಯದಲ್ಲಿ ನಡೆದ ವಕೀಲರ ದಿನಾಚರಣೆ ಸಮಾರಂಭದಲ್ಲಿ ನಾಡೋಜ ಡಾ.ಪಾಟೀಲ ಪುಟ್ಟಪ್ಪನವರ ಉಪನ್ಯಾಸ. ವಕೀಲರ ಸಂಘದ ಅಧ್ಯಕ್ಷ ಕೆ.ಎನ್ ಸುಬ್ಬಾರೆಡ್ಡಿ, ಶಿಕ್ಷಣ ತಜ್ಞ ಡಾ.ವೂಡೆ ಪಿ.ಕೃಷ್ಣ ಮುಕ್ತ ಪ್ರತಿಷ್ಠಾನದ ಅಧ್ಯಕ್ಷ ಎಚ್.ಎಸ್.ಆರ್.ಪ್ರಸಾದ್ ಇದ್ದಾರೆ.

ರಾಜ್ಯಪ್ರಗತಿ ೬ ಜನವರಿ 2013

# ಡಬ್ಲ್ಯೂ.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ

## ನಿಜವಾದ ಪ್ರಜಾಪ್ರಭುತ್ವ ಮತ್ತು ಗ್ರಾಮ ಸ್ವರಾಜ್ಯದ ಬಗೆಗೆ ಅದ್ಭುತ ಉಪನ್ಯಾಸ ನೀಡಿದ ಡಾ. ಜೆ.ಎಸ್.ಪಾಟೀಲರ ಬಗೆಗೆ ಗಾಂಧಿ ಅನುಯಾಯಿ ಡಾ. ಹೊ. ಶ್ರೀನಿವಾಸಯ್ಯ ಮೆಚ್ಚುಗೆ

ಇಂದು ಗ್ರಾಮ ಸ್ವರಾಜ್ಯದ ಬಗೆಗೆ ಹೊಸ ಕಲ್ಪನೆ ನೀಡಿದ ಡಾ. ಜೆ.ಎಸ್.ಪಾಟೀಲರು ಅಭಿನಂದನಾರ್ಹರು. ಅನೇಕ ಹೊಸ ವಿಚಾರಗಳನ್ನು ತಿಳಿಸಿದ್ದಾರೆ. ಧರ್ಮಕ್ಕೆ ಹೊಸ ಅರ್ಥ ನೀಡಿದ್ದಾರೆ ಎಂದು ಅಭಿಪ್ರಾಯಪಟ್ಟ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ನಿಜವಾದ ಗ್ರಾಮ ಸ್ವರಾಜ್ಯದ ಕನಸು ಕಂಡಿದ್ದ ಸಿದ್ದವನಹಳ್ಳಿ ಕೃಷ್ಣ ಶರ್ಮ ಜೊತೆಯಲ್ಲಿದ್ದ ನಾನೇ ಪುಣ್ಯವಂತ ಎಂದು ತಿಳಿಸಿದರು. ನಾವು ಮಕ್ಕಳಿಗೆ ಇಂದು ದ್ವೇಷ ಹೇಳಿಕೊಡುತ್ತಿದ್ದೇವೆ. ಪ್ರೀತಿಯನ್ನಲ್ಲ. ಕೇವಲ ಉದ್ಯೋಗಕ್ಕಾಗಿ ವಿದ್ಯಾಭ್ಯಾಸ ನೀಡುತ್ತಿದ್ದೇವೆ. ನಿಜವಾದ ವಿದ್ಯಾವಂತರನ್ನಾಗಿ ಮಾಡುತ್ತಿಲ್ಲ ಎಂದು ವಿಷಾದಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ವೂಡೇ ಪ್ರತಿಷ್ಠಾನಗಳ ಜಂಟಿ ಸಹಯೋಗದಲ್ಲಿ 24.12.2012ರಂದು ಗಾಂಧಿ ಭವನದಲ್ಲಿ ನಡೆದ ಬ್ರಹ್ಮಸಮಾಜ ಮುಖಂಡರು ಹಾಗೂ ಗಾಂಧಿವಾದಿ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಡಾ. ಹೊ. ಶ್ರೀನಿವಾಸಯ್ಯ ಮಾತನಾಡಿದರು.

ನಿಜವಾದ ಪ್ರಜಾ ಪ್ರಭುತ್ವ-ಗ್ರಾಮ ಸ್ವರಾಜ್ಯ ಎಂಬ ವಿಷಯದ ಬಗ್ಗೆ ದತ್ತಿ ಉಪನ್ಯಾಸ ನೀಡಿದ ಹುಬ್ಬಳ್ಳಿಯ ಕರ್ನಾಟಕ ರಾಜ್ಯ ಕಾನೂನು ವಿ.ವಿ. ಉಪಕುಲಪತಿ ಡಾ. ಜೆ.ಎಸ್.ಪಾಟೀಲ್ ರಾಜಕೀಯ ಪ್ರಜಾಪ್ರಭುತ್ವ ಈಗ ದೊಡ್ಡ ದೊಡ್ಡ ಉದ್ಯಮಪತಿಗಳ ಕೈಲಿದೆ. ಮಹಾರಾಜರುಗಳ ಆಡಳಿತವಿದ್ದುದು ತಪ್ಪಿ ಜನರೇ ಆರಿಸಿರುವ ಪ್ರತಿನಿಧಿಗಳು ಆಳುವ ಪ್ರಜಾಪ್ರಭುತ್ವ ಜಾರಿಗೆ ಬಂದಿದ್ದರೂ ಈಗ ಮಂತ್ರಿ, ಶಾಸಕರು, ಸಂಸದರೆಲ್ಲರೂ ಮಹಾರಾಜರುಗಳನ್ನು ಮೀರಿಸಿದ್ದಾರೆ. ಇಂದಿನ ಪ್ರಜಾಪ್ರಭುತ್ವಕ್ಕೆ ತರ್ಕವೇ ಇಲ್ಲ. ಓಟು ಕೊಟ್ಟು ಆರಿಸಿದ ಪ್ರತಿನಿಧಿ ಆಯ್ಕೆಯಾದ ಮರುಕ್ಷಣವೇ ನಿಮ್ಮನ್ನು ಮರೆತು ಮುಂದಿನ ಚುನಾವಣೆಗಾಗಿ ಹಣ ಮಾಡುವುದನ್ನೇ ಯೋಚಿಸುತ್ತಾನೆ ಎಂದು ಹೇಳಿದರು. ಸ್ವರಾಜ್ಯ ಎಂದರೆ ಅಪ್ಪಾದೇಶ. ಈ ಪದ್ಧತಿಯಲ್ಲಿ ಆಳುವವರೂ ಇರುವುದಿಲ್ಲ. ಆಳಿಸಿಕೊಳ್ಳುವವರೂ ಇರುವುದಿಲ್ಲ. ಎಲ್ಲರೂ ಪರಸ್ಪರ ಸಹಕರಿಸಿ ಎಲ್ಲಾ ಕೆಲಸಗಳನ್ನು ಪೂರೈಸುವುದೇ ಗ್ರಾಮಸ್ವರಾಜ್ಯದ ಪರಿಕಲ್ಪನೆ. ಅನೇಕ ವಿಶ್ವವಿದ್ಯಾಲಯಗಳಿವೆ. ಆದರೆ ಎಲ್ಲಾ ಕುಲಗೆಟ್ಟು ಹೋಗಿವೆ. ಅವುಗಳಿಂದ ನಿಜವಾದ ಪ್ರಜಾಪ್ರಭುತ್ವದ ಬಗೆಗೆ ನಿರೀಕ್ಷಿಸುವ ಹಾಗಿಲ್ಲ. ಹೀಗಾಗಿ ನಿಜವಾದ ಭಾರತೀಯರಂತೆ ಚಿಂತಿಸಿ. ಜವಾಬ್ದಾರಿಯಿಲ್ಲದ ಸ್ವಾತಂತ್ರ್ಯ ಸಮಾಜಕ್ಕೆ ಹಾನಿಕರ ಎಂಬುದನ್ನು ಅರಿತುಕೊಳ್ಳಿ.

ನಾವು ಏನಾಗಿದ್ದೇವೆ, ಏನು ಮಾಡಬೇಕು ಎಂಬುದನ್ನು ಕೂಲಂಕಷವಾಗಿ ಮನಗಾಣಿರಿ. ನಿಜವಾದ ಸ್ವರಾಜ್ಯದ ಕಲ್ಪನೆ ಮೂಡುತ್ತದೆ ಎಂದು ಜೆ.ಎಸ್.ಪಾಟೀಲ್ ಬೋಧಿಸಿದರು. ಗ್ರಾಮ ಸ್ವರಾಜ್ಯದ ಪ್ರಾಮಾಣಿಕ ಪ್ರತಿಪಾದಕರಾಗಿದ್ದ ಡಬ್ಲ್ಯೂ.ಎಚ್.ಹನುಮಂತಪ್ಪ ಅವರನ್ನು ಸ್ಮರಿಸಿಕೊಂಡರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ. ಜಿ.ಬಿ.ಶಿವರಾಜು ನಿರೂಪಿಸಿದ ಕಾರ್ಯಕ್ರಮದಲ್ಲಿ ವೂಡೆ ಪಿ.ಕೃಷ್ಣ ಸ್ವಾಗತಿಸಿದರು. ಡಬ್ಲ್ಯೂ.ಎಚ್.ದೇವಕುಮಾರ್ ವಂದಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಗೌ. ಕಾರ್ಯದರ್ಶಿ ಸಿದ್ಧಾರ್ಥ ಶರ್ಮ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಡಿ.ಕೆ.ಕೋದಂಡರಾಮ ಉಪಸ್ಥಿತರಿದ್ದರು.